ಜಾನಪದ ಕಾವ್ಯ ಮಾಲೆ

# ನಾಲ್ಕು ನಾಡಪದಗಳು.

ಸಂಕಲನಕಾರರು :

ಬಿ. ಎಸ್. ಗದ್ದಗಿಮಠ. ಎಮ್. ಎ.



ಸಂಪಾದಕರು :

**ಬಿ. ಎಸ್. ಗದ್ದಗಿಮಠ,**

**M. A., D. P. Ed.**

**ಲಿಂಗರಾಜ ಕಾಲೇಜ ಬೆಳಗಾವಿ.**

**ಮೊದಲನೇ ಮುದ್ರಣ ೧೦೦೦**



ಪ್ರಕಾಶಕರು :

**ಬಿ. ಎಸ್. ಗದ್ದಗಿಮಠ,**

**M. A., D. P. Ed.**

ಫೂಲಭಾಗಗಲ್ಲಿ ೨೪೪/೬೦

**ಬೆಳಗಾವಿ.**

# —: ಮುನ್ನುಡಿ :—



ನನ್ನ ಹಿಂದಿನ ವಿದ್ಯಾರ್ಥಿ ಹಾಗೂ ಇಂದಿನ ಸಹೋದ್ಯೋಗಿ, ಮಿತ್ರರಾದ ಶ್ರೀ ಗದ್ದಗಿಮಠ ಅವರು ತಮ್ಮ ಸಂಕಲಿತವಾದ ಜನಪದ ಗೀತಗಳ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆದು ಕೊಡಬೇಕೆಂದು ಕೇಳಿ ನನ್ನ ಮೇಲೆ ಒಂದು ಪ್ರೀತಿಯ ಭಾರವನ್ನು ಹಾಕಿದ್ದಾರೆ. ಈ ಕೆಲಸವನ್ನು ನಾನು ಕೈಕೊಳ್ಳಲೇಬೇಕು. ಇದಕ್ಕೆ ಕಾರಣ ನನ್ನ ವಿದ್ಯಾರ್ಥಿಯ ಕೆಲಸವೆಂಬ ಅಭಿಮಾನವಷ್ಟೇ ಅಲ್ಲ, ಆದರೆ ಆ ಕಾರ್ಯದ ಮಹತ್ವದ ಅರಿವು ಮುಖ್ಯವಾಗಿದೆ. ಈ ಚಿಕ್ಕ ಲೇಖದಲ್ಲಿ ಜನಪದ ಸಾಹಿತ್ಯದ ಸ್ವರೂಪವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕೆಂದಿದ್ದೇನೆ.

ಶ್ರೀ ಗದ್ದಗಿಮಠ ಅವರು ಈ ಸಂಕಲನದಲ್ಲಿಯ ಕೆಲವು ಗೀತಗಳನ್ನೂ ತಮ್ಮ ಸಂಕಲನದಲ್ಲಿಯ ಬೇರೆ ಕೆಲವೊಂದು ಗೀತಗಳನ್ನೂ ಆಗಾಗ ನನ್ನೆದುರಿಗೆ ಹಾಡಿ ತೋರಿಸಿದ್ದರು. ಅವುಗಳ ಕಾವ್ಯಗುಣವೂ ಸರಳತೆಯೂ ಉತ್ತರ ಕರ್ನಾಟಕದ ತಿರುಳ್ಗನ್ನಡದ ದೇಸಿಯೂ ನನ್ನ ಮನಸ್ಸನ್ನು ಕರ್ಷಿಸಿದವು. ಇವನ್ನು ಪ್ರಕಟಿಸಬೇಕೆಂದು ಅವರನ್ನು ಪ್ರಾರ್ಥಿಸಿದೆನು. ಈಗ ಪ್ರಕಟಿಸಿರುವದು ಅವರ ದೊಡ್ಡ ಸಂಗ್ರಹದ ತೀರ ಒಂದು ಸಣ್ಣ ಭಾಗ. ತಮ್ಮ ಮನೆಯಲ್ಲಿಯೇ ಪರಂಪರೆಯಾಗಿ ಬೆಳೆದುಕೊಂಡು ಬಂದ ಹಾಡುಗಳಲ್ಲಿ ಕೆಲವನ್ನು ಮಾತ್ರ ಬರೆದಿಡುವದು ಇವರಿಗೆ ಸಾಧ್ಯವಾಗಿದೆ ಇದರ ವಿಸ್ತಾರವಾದ ಕಥೆಯನ್ನು ತಮ್ಮ ಅರಿಕೆಯಲ್ಲಿ ಹೇಳಿದ್ದಾರೆ. ಅದನ್ನು ಓದಿದರೆ ಇವರ ಮನೆತನದಲ್ಲಿ ಈ ಸಾಂಪ್ರದಾಯವು ಬೆಳೆದುಕೊಂಡು ಬಂದ ರೀತಿ, ಅದಕ್ಕೆ ಮುಖ್ಯ ಕಾರಣವಾದ ವ್ಯಕ್ತಿಗಳು, ಹಾಡುಗಳನ್ನು ಸಂಗ್ರಹಿಸಿದ ಬಗೆ ಇವೆಲ್ಲವುಗಳ ಬಗ್ಗೆ ತಿಳುವಳಿಕೆಯುಂಟಾಗುವದು. ಅಲ್ಲದೆ ಇವರ ಮನೆತನದ ವಿಷಯವಾಗಿಯೂ ಕಾವ್ಯ ಪ್ರತಿಭೆಯುಳ್ಳ ಇವರ ಹಿರಿಯರವಿಷಯವಾಗಿಯೂ ಆದರವು ಸಹಜವಾಗಿ ಹುಟ್ಟುವದು. ಈ ಹಾಡುಗಳಲ್ಲಿ ಕೆಲವನ್ನು ಉಳಿಸಿಕೊಂಡು ಪ್ರಕಟಿಸುವ ಶ್ರಮವಹಿಸಿದ್ದಕ್ಕಾಗಿ ಶ್ರೀ. ಗದ್ದಗಿಮಠ ಅವರ ವಿಷಯಕ್ಕೆ ಕೃತಜ್ಞತೆಯ ಭಾವವು ಹುಟ್ಟುತ್ತದೆ. ಇಂಥ ಸಂಕಲನಗಳ ಪ್ರಕಟನೆಯಿಂದ ಇವರು ಎರಡು ಕಾರ್ಯಗಳನ್ನು

ಸಾಧಿಸಿದ್ದಾರೆ. ಕನ್ನಡ ಸಾಹಿತ್ಯ ಭಾಂಡಾರಕ್ಕೆ ನಮ್ಮ ನಾಡಿನ ಅಪಾರ ಜನಪದಸಾಹಿತ್ಯದ ಕೆಲವೊಂದು ಸರಸವಾದ ಹಾಡುಗಳನ್ನು ಕಾಣಿಕೆಯಾಗಿ ಕೊಟ್ಟಿದ್ದಲ್ಲದೆ ತಮ್ಮ ಜನಪದ ಕವಿಗಳಾದ ಹಿರಿಯರ ಹೆಸರನ್ನೂ ಉಳಿಸಿ ಅವರಿಗೆ ನ್ಯಾಯ್ಯವಾಗಿ ಸಲ್ಲಬೇಕಾದ ಋಣವನ್ನು ಸ್ವಲ್ಪ ಮಟ್ಟಿಗೆ ತೀರಿಸಿದ್ದಾರೆ

ಕನ್ನಡ ನಾಡಿನಲ್ಲಿ ಜನಪದ ಸಾಹಿತ್ಯವು ಬಹುಮುಖವಾಗಿ ಬೆಳೆದು ಕೊಂಡು ಬಂದಿದೆ. "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್" ಎಂದು ನಾತ್ಮಿಕಾಭಿಮಾನದಿಂದ ಕನ್ನಡಿಗರ ರಸಿಕತೆಯನ್ನು ಕೊಂಡಾಡಿದ ಚಕ್ರವರ್ತಿಕವಿ, ನೃಪತುಂಗನ ಮಾತು ಅಕ್ಷರಶಃ ನಿಜವೇನೋ ಎಂಬಂತೆ ನಮ್ಮ ಭಾಷೆಯಲ್ಲಿ ನಿರಕ್ಷರಿಗಳೆಂದು ಹೇಳುವ ಹಳ್ಳಿಯ ಹೆಂಗಸರೂ ಗಂಡಸರೂ ರಚಿಸಿದ ಸಾಹಿತ್ಯವು ನಿಜ ವಾಗಿಯೂ ಅಪಾರವಾಗಿದೆ. ಇನ್ನೂ ಈ ತರದ ಸಾಹಿತ್ಯ ಬೆಳೆಯುತ್ತಲೇ ಇದೆ. ಆದರೆ ಹಿಂದಿನ ಜನಪದ ಸಾಹಿತ್ಯವನ್ನು ನಮ್ಮ ನಾಡಿನವರು ಮರೆಯುತ್ತಲೇ ಇದ್ದಾರೆ. ಇದೊಂದು ಬಹಳ ಅನಿಷ್ಟಕಾರಿಯಾದ ಸಂಗತಿ. ಜನಪದ ಸಾಹಿತ್ಯವನ್ನು ಸಂಗ್ರಹ ಮಾಡಬೇಕು, ಬರೆದಿಡಬೇಕು, ಪ್ರಕಟಿಸ ಬೇಕು ಎಂಬ ವಿಚಾರವು ತೀರ ಇತ್ತೀಚಿನದು. ಈ ಹತ್ತಿಪ್ಪತ್ತು ವರುಷಗಳಲ್ಲಿ ಕೆಲವೊಂದು ಜನಪದ ಸಾಹಿತ್ಯ ಸಂಗ್ರಹಗಳು ಬೆಳಕಿಗೆ ಬಂದಿವೆ. ಇನ್ನೂ ಜನರ ಬಾಯಲ್ಲಿ ಉಳಿದುಕೊಂಡು ಸಂಗ್ರಹಿಸಬಹುದಾದ ಜನಪದ ಸಾಹಿತ್ಯವು ಎಣಿಕೆಗೆ ಮೀರಿದ್ದಾಗಿದೆ ಆದರೆ ಜನರ ಬಾಯಲ್ಲಿ ನಿಲ್ಲದೆ ಮರೆತುಹೋದ ಮಹಾ ರಾಶಿರಾಶಿಯಾದ ಜನಪದ ಸಾಹಿತ್ಯವನ್ನು ನೆನಿಸಿ ಕೊಂಡರೆ ಕನ್ನಡ ಸಾಹಿತ್ಯಕ್ಕೆ ಎಂಥ ಹಾನಿಯಾಯಿತಲ್ಲ ಎಂದು ಮನಕ್ಕೆ ನೋವು ಉಂಟಾಗುತ್ತಿದೆ. ಹೀಗೆ ಗಾಳಿಯಲ್ಲಿ ಹಾರಿಹೋದ ಜನ ಸಾಹಿತ್ಯದಲ್ಲಿ ಎಂಥ ಮಹಾಕೃತಿಗಳು, ಎಂಥ ಸುಂದರವಾದ ಭಾವಗೀ ಎಂಥ ಬೆಡಗಿನಭಾಷೆ ಮಾಯವಾಗಿ ಹೋದವೋ ಯಾರು ಹೇಳಬಲ್ಲರು. ?

ನಮ್ಮ ಪಂಡಿತರು ಮೊದಲಿನಿಂದಲೂ ಜನಪದ ಸಾಹಿತ್ಯಕ್ಕೆ ಪ್ರಾಶಸ್ತ್ಯ ವನ್ನು ಕೊಡಲಿಲ್ಲ. ಸಾಹಿತ್ಯವು, ಪಂಡಿತರು ಹಾಗೂ ವಿವಿಧಕಳಾ ಮಂಡಿತರು ಇವರಿಗಾಗಿಯೇ ಎಂಬ ದೃಢಭಾವನೆ ಅವರಲ್ಲಿ ಬೇರೂರಿತ್ತು. ಆದುದರಿಂದ ಜನಪದಸಾಹಿತ್ಯವನ್ನು ಬರೆದಿಡುವ ಗೋಜಿಗೆ ಅವರು

ಹೋಗಲಿಲ್ಲ. ಏಕೆಂದರೆ ಅವರು ಅದನ್ನು ಸಾಹಿತ್ಯವೆಂದು ಭಾವಿಸಲೇ ಇಲ್ಲ. ಇನ್ನು ಜನಪದಸಾಹಿತ್ಯ ಕರ್ತೃಗಳಂತೂ ಬಹುತರವಾಗಿ ನಿರಕ್ಷರಿಗಳು. ಅಲ್ಲದೆ ಇವನ್ನು ಯಾರಿಂದಲಾದರೂ ಬರೆಯಿಸಿ ಇಡಬೇಕೆಂಬ ವಿಚಾರವು ಅವರನ್ನು ಯಾವಾಗಲೂ ಸೋಂಕಿದಂತೆ ಕಾಣಿಸುವದಿಲ್ಲ. ಅವರು ಸ್ಫೂರ್ತಿ ತುಂಬಿದಾಗ, ಪ್ರಸಂಗ ಬಂದಾಗ, ಸಂತೋಷವಾದಾಗ ತಮಗೆ ಬಂದಂತೆ ಹಾಡಿಕೊಂಡು ತೃಪ್ತಿ ಪಡೆದರು. ಕೆಲವೊಂದು ಹಾಡುಗಳು ಜನರ ಬಾಯಲ್ಲಿ ಉಳಿದು ಅನೇಕವೇಳೆ ಮಾರ್ಪಾಟು ಹೊಂದಿ ಬೆಳೆಯುತ್ತಾ ಬಂದವು ಕೆಲವೊಂದು ರೀತಿಯ ಹಾಡುಗಳು ಕೆಲವೊಂದು ಪ್ರದೇಶಗಳಿಗೆ ಮಾತ್ರ ಮರ್ಯಾದಿತವಾಗಿವೆ. ಆಯಾ ಪ್ರದೇಶಗಳ, ಆಯಾ ಹಳ್ಳಿಗಳ ವಿಶಿಷ್ಟವಾದ ರೀತಿನೀತಿಗಳನ್ನೂ ಕಥೆಗಳನ್ನೂ ಕುರಿತು ಹಾಡಿದವುಗಳಾಗಿವೆ. ಹೀಗೆ ಒಂದೊಂದು ಪ್ರದೇಶ ಇಲ್ಲವೆ ಹಳ್ಳಿಯ ಹಾಡುಗಳ ಸಂಗ್ರಹಗಳನ್ನೂ ಮಾಡುತ್ತ ಹೋಗಬಹುದು. ಹೀಗೆ ಮಾಡುವದು ಸಾಹಿತ್ಯದ ದೃಷ್ಟಿಯಿಂದಲೂ ಜನತೆಯಲ್ಲಿ ಬೇರೂರಿದ ಸಂಸ್ಕೃತಿಯನ್ನು ತಿಳಿದುಕೊಳ್ಳುವ ದೃಷ್ಟಿಯಿಂದಲೂ ಅತ್ಯಂತ ಮಹತ್ವದ ಕಾರ್ಯವಾಗಿದೆ. ಇಂಥ ಹಲವಾರು ಸಂಗ್ರಹಗಳು ನಮ್ಮೆದುರಿಗೆ ಇದ್ದರೆ ಅವುಗಳಲ್ಲಿ ಕಾವ್ಯದೃಷ್ಟಿಯಿಂದ ಮಹತ್ವವುಳ್ಳ ಅಂಶಗಳನ್ನು ಆರಿಸುವದಕ್ಕೆ ಅನುಕೂಲವಾಗುತ್ತದೆ. ಜನಪದ ಸಾಹಿತ್ಯವೆಲ್ಲವೂ ಉಚ್ಚವರ್ಗದ ಸಾಹಿತ್ಯಕ್ಕೆ ಸೇರಿದುದೆಂಬ ಅತಿರೇಕದ ಅಭಿಪ್ರಾಯವನ್ನು ನಾವಾರೂ ಇಟ್ಟುಕೊಳ್ಳುವದು ಬೇಡ. ಗ್ರಂಥಸ್ಥ ಸಾಹಿತ್ಯದಲ್ಲಿಯಂತೆ ಇಲ್ಲಿಯೂ ಒಳ್ಳೆಯದೂ ಒಳ್ಳೆಯದಲ್ಲದ್ದೂ ಸಾಧಾರಣಮಟ್ಟದ್ದೂ ಹೀಗೆ ಬೇರೆ ಬೇರೆ ಪ್ರಕಾರಗಳಿದ್ದುಂಟು. ಅದರಲ್ಲಿ ಒಳ್ಳೆಯದನ್ನು ಸ್ವೀಕರಿಸಿ ರಸಗ್ರಹಣವನ್ನು ಮಾಡುವದು ರಸಿಕರ ಹಾಗೂ ವಿಮರ್ಶಕರ ಕೆಲಸ.

ನಮ್ಮ ಜನಪದ ಸಾಹಿತ್ಯವನ್ನು ಒಟ್ಟಿನಲ್ಲಿ ಪರಿಶೀಲಿಸಿದರೆ ಗ್ರಂಥಸ್ಥ ಸಾಹಿತ್ಯಕ್ಕಿಂತ ಭಿನ್ನವಾದ ಕೆಲವೊಂದು ವಿಶಿಷ್ಟ ಲಕ್ಷಣಗಳು ಎದ್ದು ತೋರುವವು. ಇವುಗಳಲ್ಲಿ ವಿಷಯಗಳ ಆಯ್ಕೆ, ಹಾಗೂ ಉಪಯೋಗಿಸಿದ ಭಾಷೆ ಇವೆರಡೂ ಮುಖ್ಯವೆಂದು ಹೇಳಬಹುದು. ಜನಪದ ಸಾಹಿತ್ಯವು ಸಾಮಾನ್ಯ ಜನತೆಯ ಜೀವನದಿಂದ ಬೆಳೆದು ಬಂದುದು. ಹಾಗೂ ಸಾಮಾನ್ಯ ಜನತೆಗಾಗಿಯೇ ರಚಿತವಾದುದು. ಆದುದರಿಂದ ನಮ್ಮ ಸಾಮಾನ್ಯ ಜನತೆಯ ಜೀವನಕ್ಕೂ ಈ ಸಾಹಿತ್ಯಕ್ಕೂ ಅತ್ಯಂತ ನಿಕಟವಾದ ಸಂಬಂಧವಿದೆ. ಜನ

ತೆಮ ಜೀವನದ ವಿವಿಧ ಮುಖಗಳ ಪ್ರತಿ ಬಿಂಬವು ಈ ಸಾಹಿತ್ಯದಲ್ಲಿ ತುಂಬಾ ಮೂಡಿದೆ. ಸಾಮಾನ್ಯ ಜನರ ಸುಖ, ದುಃಖ, ಆಶೆ, ಆಶೆಯು, ಜೀವನದ ಅನೇಕ ತೆರನಾದ ಪ್ರಸಂಗಗಳು ಇವೇ ಮೊದಲಾದುವು ಈ ಸಾಹಿತ್ಯಕ್ಕೆ ವಿಷಯಗಳಲ್ಲದೆ ಪುರಾಣದ ಕಥೆಗಳೂ ಪೂರ್ವದ ಭಗವದ್ಭಕ್ತರ ಕಥೆಗಳೂ ಸಾಮಾನ್ಯ ಜನಜೀವನದ ವಾತಾವರಣದಲ್ಲಿ ಚಿತ್ರಿತವಾಗಿವೆ. ಇಲ್ಲಿ ಕಾಣುವ ಭಾಷೆ ನಮ್ಮ ಹಳ್ಳಿಯ ಜನರು ಬಳಸುವ ಪಾಂಡಿತ್ಯದ ಭಾರವಿಲ್ಲದ ಸಾರವತ್ತಾದ ಕನ್ನಡವೆಂದು ಹೇಳಬಹುದು. ಕನ್ನಡದಲ್ಲಿ ಬೇರೆ ಬೇರೆ ದೇಶಿಗಳಿವೆಯೆಂದು ನೃಪತುಂಗನು ಹೇಳಿದ್ದಾನೆ. ಹಾಗೆಯೇ ಜನಪದ ಸಾಹಿತ್ಯದಲ್ಲಿ ಕನ್ನಡನಾಡಿನಲ್ಲಿ ಬೇರೆ ಬೇರೆ ಪ್ರದೇಶಗಳ ಬೇರೆ ಬೇರೆ ದೇಶಿಯನ್ನು ಬಳಸಿಕೊಂಡದ್ದು ಗೋಚರವಾಗುವದು. ಒಟ್ಟಿನಲ್ಲಿ ಇಲ್ಲಿಯ ಭಾಷೆ ಜನಸಾಮಾನ್ಯರಾಡುವ ಭಾಷೆಯೆಂದೇ ಹೇಳಬಹುದು. ಇಲ್ಲವೆ ಅದಕ್ಕೆ ತೀರ ಹತ್ತಿರವಾದ ಭಾಷೆಯೆಂಬುದರಲ್ಲಿ ಏನೂ ಸಂಶಯವಿಲ್ಲ.

ಜನಪದ ಸಾಹಿತ್ಯದ ಕವಿಯಾಗಲೀ ಗ್ರಂಥಸ್ಥ ಕವಿಯಾಗಲೀ ಅವನು ಕವಿ ಅಹುದೋ ಅಲ್ಲವೋ ಎಂಬುದನ್ನು ನೋಡಬೇಕಾದುದು ಮುಖ್ಯವಾದುದು. ಆತನಲ್ಲಿ ಕಾವ್ಯ ಪ್ರತಿಭೆಯಿದ್ದರೆ ಅವನು ರಚಿಸಿದ್ದು ಜನಪದ ಗೀತವಾದರೂ ಸರಿಯೆ, ಮಹಾ ಕಾವ್ಯವಾದರೂ ಸರಿಯೆ ಅದಕ್ಕೆ ಮಹತಿ ಉಂಟಾಗುತ್ತದೆ. ನಮ್ಮ ಜನಪದ ಸಾಹಿತ್ಯವನ್ನು ನೋಡಿದಾಗ ನಿಜವಾಗಿಯೂ ಮಹಾ ಕಾವ್ಯವೆಂದು ಹೇಳಬಹುದಾದ ಕೆಲವೊಂದು ಭಾಗಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಈ ದೃಷ್ಟಿಯಿಂದ ಜನಪದ ಸಾಹಿತ್ಯಕ್ಕೂ ಗ್ರಂಥಸ್ಥ ಸಾಹಿತ್ಯದಷ್ಟೇ ಮಹತ್ವವನ್ನು ಕೊಡಬೇಕಾಗುವದು.

ಶ್ರೀ ಗದ್ದಗಿಮಠ ಅವರು ಮಾಡಿದ ಈ ಸಂಕಲನದಲ್ಲಿ ನಾಲ್ಕು ಜನ ಮುಗ್ಧ ಶರಣರ ವಿಷಯವಾಗಿ ಹಾಡುಗಳಿವೆ. ಹೀಗೆ ಸಂಕಲನ ಮಾಡುವದರಲ್ಲಿಯೂ ಇವರು ಒಂದು ಔಚಿತ್ಯ ಜ್ಞಾನವನ್ನು ತೋರಿಸಿದ್ದಾರೆ. ಇಲ್ಲಿಯವರೆಗಾದ ಜನಪದಸಾಹಿತ್ಯ ಸಂಕಲನಗಳಲ್ಲಿ ಬಿಡಿಬಿಡಿಯಾದ ಒಂದಕ್ಕೊಂದು ಸಂಬಂಧವಿಲ್ಲದ ಹಾಡುಗಳೇ ಹೆಚ್ಚು. ಆದರೆ ಇಲ್ಲಿ ಮಾತ್ರ ವಿಷಯ ನಿರೂಪಣೆಯಲ್ಲಿ ಏಕಸೂತ್ರತೆಯ ದೃಷ್ಟಿಯನ್ನಿಟ್ಟುಕೊಂಡು ಹಾಡುಗಳನ್ನು ಆರಿಸಲಾಗಿದೆ. ಇನ್ನು ಮುಂದೆಯೂ ಇದೇ ರೀತಿಯಾಗಿ

ಅವರು ಮಾಡುವ ಸಂಕಲನಗಳಿಗೆ ಏಕ ಸೂತ್ರತೆಯ ದೃಷ್ಟಿಯನ್ನಿಟ್ಟು ಕೊಳ್ಳುವರು. ಈ ನಾಲ್ಕು ಶರಣರ ಹಾಡುಗಳು ತ್ರಿಪದಿಯ ಮಟ್ಟದಲ್ಲಿ ರಚಿತವಾಗಿವೆ. ಈ ತ್ರಿಪದಿ ಬಹಳ ಹಿಂದಿನ ಕಾಲದಿಂದಲೂ ಕನ್ನಡ ಭಾಷೆ ಯಲ್ಲಿ ಬಳಕೆಯಲ್ಲಿದೆ. ಒಂದೆರಡು ಬಹಳ ಪೂರ್ವಕಾಲದ ಶಿಲಾಶಾಸನ ಗಳಲ್ಲಿಯೂ ಈ ವೃತ್ತವನ್ನು ಉಪಯೋಗಿಸಿಕೊಳ್ಳಲಾಗಿದೆ. ಈ ವೃತ್ತದಲ್ಲಿ ರಚಿತವಾದ ಪದಗಳನ್ನು ಬೇರೆ ಬೇರೆ ಧಾಟಿಗಳಲ್ಲಿ ಪ್ರಸಂಗಕ್ಕೆ ಅನುಕೂಲ ವಾಗುವಂತೆ ಹಾಡಿಕೊಳ್ಳಬಹುದು. ಸಂಕಲನಕಾರರು ಹೇಳುವಂತೆ 'ನೂರೊಂದು ಧಾಟಿಯಲ್ಲಿ' ಹಾಡಬಹುದು. ಇವನ್ನು ರಚಿಸಿದ ಕವಿ ನಿರಕ್ಷರಿ ಯೆಂದು ಹೇಳಿಕೊಂಡಿದ್ದರೂ ಛಂದಸ್ಸಿನ ದೃಷ್ಟಿಯಿಂದ ದೋಷಗಳು ಕಾಣ ಬರದೇ ಇರುವದು ಆಶ್ಚರ್ಯವನ್ನುಂಟು ಮಾಡುತ್ತದೆ. ನಮ್ಮ ಛಂದೋ ಲಕ್ಷಣಕಾರರು ಅತಿ ಮುಖ್ಯವೆಂದು ಪರಿಗಣಿಸಿದ ದ್ವಿತಿಯಾಕ್ಷರ ಪ್ರಾಸ ವನ್ನು ಕವಿಯು ಎಲ್ಲಿಯೂ ತಪ್ಪಿಸಿಲ್ಲ. ಇಂಥ ಛಂದಸ್ಸು ಹಾಗೂ ಭಾಷೆಯ ಮೇಲಿನ ಪ್ರಭುತ್ವವು ಪಾಂಡಿತ್ಯದಿಂದಲ್ಲದೆ ನೈಸರ್ಗಿಕ ಪ್ರತಿಭೆ ಯಿಂದ ಬಂದುದು.

ಈ ಸಂಕಲನದಲ್ಲಿಯ ಹಾಡುಗಳಲ್ಲಿ ಬಿಜ್ಜಮಹಾದೇವಿ, ಬೇಡರ ಕನ್ನಯ್ಯ, ಕೋಳೂರ ಕೊಡಗೂಸು, ಗೊಲ್ಲಾಳ ಈ ನಾಲ್ಕು ಜನ ಮುಗ್ಧ ಶರಣರ ಮಹಿಮೆಯನ್ನು ಉತ್ಸಾಹ ಪೂರ್ವಕವಾಗಿ ಭಕ್ತಿಯಿಂದ ಕವಿ ಹಾಡಿ ದ್ದಾನೆ. ಈ ಶರಣರ ಲಘು ಚರಿತೆಗಳು ಹರಿಹರ, ಷಡಕ್ಷರಿದೇವ ಮೊದಲಾದ ಪ್ರಖ್ಯಾತ ವೀರಶೈವ ಕವಿಗಳ ಕಾವ್ಯಗಳಲ್ಲಿಯೂ ಕಂಡು ಬರುತ್ತವೆ. ಆದರೆ ಅವರ ರೀತಿಯೂ ನಮ್ಮ ಈ ಜನಪದ ಕವಿಯ ರೀತಿಯೂ ಭಿನ್ನವಾಗಿವೆ. ಕಥೆ ಸಾಧಾರಣವಾಗಿ ಒಂದೇ ಆಗಿದ್ದರೂ ಹೇಳುವ ರೀತಿಯಲ್ಲಿ ಮಹದಂತರವಿದೆ. ಕವಿಯಿಂದ ಕವಿಗೆ ಹೇಳುವ ರೀತಿಯಲ್ಲಿ ಅಂತರ ಕಾಣುವದು ಸಹಜವೇ. ಏಕೆಂದರೆ ನಿಜವಾದ ಕಾವ್ಯದಲ್ಲಿ ಕವಿಯ ಮಹತ್ವವು ಮೂಡಿರುತ್ತಿದೆ ಇದರ ನಿದರ್ಶನಕ್ಕೆ ಮೇಲೆ ಉಲ್ಲೇಖಿಸಿದ ಹರಿಹರ ಷಡಕ್ಷರ ದೇವರು ಒಂದೇ ಕಥೆ ಯನ್ನು ಹೇಗೆ ಬೇರೆಬೇರೆ ರೀತಿಯಲ್ಲಿ ನಿರೂಪಿಸಿರುತ್ತಾರೆಂಬುದನ್ನು ಅನು ಲಕ್ಷಿಸಬಹುದು. ಅದರಂತೆ ಈ ಜನಪದ ಕವಿಯ ರೀತಿಯು ತನ್ನದೇ ಆದ ವೈಶಿಷ್ಟ್ಯವನ್ನು ಒಳಕೊಂಡಿದೆ. ಹಾಗೆಯೇ ಜನಪದ ಸಾಹಿತ್ಯದ ವೈಶಿಷ್ಟ್ಯ ಗಳನ್ನೂ ಒಳಕೊಂಡಿದೆ.

ಇಲ್ಲಿ ಉಪಯೋಗಿಸಿದ ಭಾಷೆಯ ವಿಷಯಕ್ಕೆ ಒಂದೆರಡು ಮಾತುಗಳನ್ನು ಮೊದಲು ಹೇಳಬೇಕು. ಈ ಹಾಡು ರಚನೆಯಾದದ್ದು ಬಾದಾಮಿಯ ಸಮೀಪದಲ್ಲಿರುವ ಕೆರೂರೆಂಬ ಹಳ್ಳಿಯಲ್ಲಿ. ನೃಪತುಂಗನು ತಿರುಳ್ಗನ್ನಡ ನಾಡಿನ ಸೀಮೆಯನ್ನು ಹೇಳುವಾಗ ಉಲ್ಲೇಖಮಾಡಿದ **'ಕಿಸುವೊಳಲ್'** ಅಂದರೆ ಪಟ್ಟದ ಕಲ್ಲಿಗೆ ತೀರ ಸಮೀಪವಾಗಿದೆ. ಎಂದ ಮೇಲೆ ಇಲ್ಲಿ ಬರುವ ಭಾಷೆ ತಿರುಳ್ಗನ್ನಡ ಭಾಷೆಯ ಪರಂಪರೆಗೆ ಸೇರಿದ್ದೆಂದು ಹೇಳಬಹುದು. ಈ ಭಾಷೆಯಲ್ಲಿ ಕನ್ನಡದ ಅಂತಃಸತ್ವವನ್ನೂ ನೋಡಬಹುದು. ಇಲ್ಲಿಯ ಕೆಲವೊಂದು ಶಬ್ದಗಳೂ ವಾಕ್ಯಪ್ರಚಾರಗಳೂ ಕರ್ನಾಟಕದ ಎಲ್ಲ ಭಾಗಗಳಲ್ಲಿ ತಿಳಿಯಲಿಕ್ಕಿಲ್ಲ. ಇದು ಸಹಜವೇ. ಏಕೆಂದರೆ "ದೇಸಿ ಬೇಱಾದುದರಿಂದ". ಒಂದು ಭಾಗದ ದೇಸಿ ಮತ್ತೊಂದು ಭಾಗದವರಿಗೆ ತಿಳಿದುಕೊಳ್ಳಲಿಕ್ಕೆ ಕಠಿಣವಾಗುತ್ತದೆ. ಅದೂ ಇದೂ ಕನ್ನಡವೇ ಒಳ್ಗನ್ನಡವೇ ಎಂಬುದನ್ನು ನಾವು ಯಾವಕಾಲಕ್ಕೂ ಮರೆಯಬಾರದು. ಈ ಹಾಡುಗಳಲ್ಲಿ ಕೆಲವೊಂದು ಶಬ್ದಗಳು ಪ್ರೌಢಭಾಷೆಯ ಶಬ್ದಗಳಂತೆಯೂ ಇನ್ನೂ ಕೆಲವು ತೀರ ಹಳ್ಳಿಗಾಡಿನ ಶಬ್ದಗಳಂತೆಯೂ ಭಾಸವಾಗುತ್ತವೆ. ಎಂದರೆ ಇದು ಒಂದು ಪ್ರಕಾರದ ಅಸಂಬದ್ಧ ಭಾಷಾ ಮಿಶ್ರಣವೇ ಎಂದು ಕೆಲವರು ಶಂಕಿಸಬಹುದು. ಆದರೆ ಇಂಥ ಶಂಕೆಗೆ ಏನೂ ಆಸ್ಪದವಿಲ್ಲ. ಏಕೆಂದರೆ ನಮ್ಮ ಉತ್ತರ ಕರ್ನಾಟಕದ ಹಳ್ಳಿಯವರೊಡನೆ ಸಂಪರ್ಕಬಂದವರೆಲ್ಲರಿಗೂ ಅವರ ಸಹಜ ಭಾಷೆಯೇ ಈ ತೆರನಾಗಿದೆ ಎಂಬುದು ಪ್ರತೀತಿಗೆ ಬರುತ್ತದೆ. ಇದಕ್ಕೆ ಬೇಕಾದರೆ ಈ ಹಾಡುಗಳಿಂದ ಒಂದೆರಡು ಉದಾಹರಣೆಗಳನ್ನು ಕೊಡಬಹುದು.

ಕೋಪ ಕುರುಬಗೆ ಮೀರಿ, ತಾಪವೇರಿತು ತಲೆಗೆ
ಮಾಪು ನಾಮಾಡೆ ಮಗನನ್ನು | ಸಂಪತ್ತ
ಶಾಪ ಮಾಡಿದನು ಸಂದಿಂದು || —

ಗೊಲ್ಲಾಳ || ೫೦ ||

ಇದರಲ್ಲಿ ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಕೇಳಬರುವ ಅಶುದ್ಧವೆನಿಸಬಹುದಾದ ಶಬ್ದಗಳೂ ವಾಕ್ಯಪ್ರಚಾರಗಳೂ ಇದ್ದರೂ ಹೇಳಬೇಕಾದ ಮಾತನ್ನು ನೇರವಾಗಿ ಮನಮುಟ್ಟುವಂತೆ ಕವಿ ಹೇಗೆ ಹೇಳಿದ್ದಾನೆಂಬುದನ್ನು ನಾವು ಗಮನಿಸಬೇಕು.

ಕರಿಗೊರಲ ಭೂಷಣನೆ, ಕರಿದೊಗಲಹೊದ್ದವನೆ
ಹರಹರನೆ ಶಿವನೆ ಭಜಿಸುವೆನು । ಕಾಳತ್ತಿ
ಗುರುದೇವ ಮೆಚ್ಚಿ ನೀವರಿಸು
ಬೇಡರಕನ್ನಯ್ಯ ॥ ೧೭ ॥

ಈ ಪದ್ಯದಲ್ಲಿ ಭಾಷೆಯೆಲ್ಲವೂ ವ್ಯಾಕರಣ ದೃಷ್ಟಿಯಿಂದ ಪರಿಶುದ್ಧವಾಗಿದೆ. ಗ್ರಂಥಸ್ಥ ಸಾಹಿತ್ಯದ ಯಾವ ಕವಿಯಾದರೂ ಈ ರೀತಿ ಬರೆಯಬಹುದಾಗಿತ್ತು. ಹೀಗೆ ಭಾಷೆ ಒಂದೇ ಸವನಾಗಿ ಇಲ್ಲದಿರುವದಕ್ಕೆ ನಾವಾಡುವ ಭಾಷೆಯೇ ಈ ರೀತಿಯಾಗಿದೆ ಎಂದು ಸಮಾಧಾನ ಕೊಡಬಹುದು. ಇಲ್ಲಿ ಇನ್ನೂ ಒಂದು ಮಾತನ್ನು ನಾವು ಅವಶ್ಯವಾಗಿ ಗಮನಿಸಬೇಕು. ಕವಿ ನಿರಕ್ಷರಿ ಎಂದು ಹೇಳಿಕೊಂಡಿದ್ದರೂ ಆತನ ಸಂಸ್ಕಾರಕ್ಕೂ ನಯಕ್ಕೂ ಏನೂ ಕಡಿಮೆಯಿಲ್ಲ. ನಮ್ಮ ಭರತಭೂಮಿಯ ಸಂಸ್ಕೃತಿಯಲ್ಲಿ ಇದೊಂದು ಲಕ್ಷಿಸತಕ್ಕ ಮಾತಾಗಿದೆ. ನಮ್ಮ ಸಾಮಾನ್ಯ ಜನತೆ ನಿರಕ್ಷರಿಗಳಾಗಿದ್ದರೂ ಉಚ್ಚ ಸಂಸ್ಕಾರವನ್ನು ಹೊಂದಿದವರಾಗಿದ್ದಾರೆ. ಈ ಹಾಡುಗಳನ್ನು ರಚಿಸಿದ ಕವಿ ಅಕ್ಷರಜ್ಞಾನವಿಲ್ಲದೆಯೂ ನಮ್ಮ ಪ್ರಾಚೀನ ಸಂಸ್ಕೃತಿಯ ಸಾರವನ್ನುಂಡಿದ್ದಾನೆ; ಅದನ್ನು ಅರಗಿಸಿಕೊಂಡಿದ್ದಾನೆ. ನಮ್ಮ ಪುರಾಣಗಳು, ಭಕ್ತರ ಕಥೆಗಳು, ವಚನಗಳು, ತತ್ವ ಪದಗಳು, ಇವೆಲ್ಲವುಗಳಲ್ಲಿಯೂ ಆತನಿಗೆ ತೀವ್ರವಾದ ಗತಿಯಿದೆ. ಆದುದರಿಂದ ಅಲ್ಲಿಯ ಭಾಷೆಯ ಪ್ರಭಾವವೂ ಈ ಹಾಡುಗಳಲ್ಲಿ ಸ್ವಾಭಾವಿಕವಾಗಿ ಕಂಡು ಬರುತ್ತದೆ. ತಾನು ಅನುಭವಿಸಿದ್ದನ್ನು, ಕೇಳಿದ್ದನ್ನು, ಕಂಡದ್ದನ್ನು ಅರಗಿಸಿಕೊಂಡು ತನ್ನ ಕಾವ್ಯಕ್ಕಾಗಿ ಉಪಯೋಗಮಾಡಿಕೊಳ್ಳುವದು ನಿಜವಾದ ಕವಿಯ ಲಕ್ಷಣ.

ಇನ್ನು ಕಾವ್ಯದ ದೃಷ್ಟಿಯಿಂದ ಈ ಹಾಡುಗಳನ್ನು ಸಮಾಲೋಚಿಸೋಣ. ನಮ್ಮ ಹಿಂದಿನ ಕಾವ್ಯಗಳಲ್ಲಿ ಹದಿನೆಂಟು ವರ್ಣನೆಗಳು ಅವಶ್ಯವಾಗಿ ಬರಲೇಬೇಕೆಂಬ ನೇಮವಿದ್ದುದರಿಂದ ಈ ವರ್ಣನೆಗಳನ್ನು ಪ್ರಸಂಗೋಚಿತವಾಗಿಯೊ, ಒಮ್ಮೊಮ್ಮೆ ಅಪ್ರಾಸಂಗಿಕವಾಗಿಯೊ ಕವಿಗಳು ತುಂಬುತ್ತಿದ್ದರು. ಸೂರ್ಯೋದಯ, ಚಂದ್ರೋದಯ, ಸೂರ್ಯಾಸ್ತ, ಚಂದ್ರಾಸ್ತ, ಬಾಲಲೀಲೆ, ಸ್ತ್ರೀಸೌಂದರ್ಯ, ಗಿರಿ, ವನ, ಸಮುದ್ರ ಮೊದಲಾದವು ಸ್ವಾಭಾವಿಕವಾಗಿ ರಮಣೀಯವಾದುವು. ಸೌಂದರ್ಯ

ಪ್ರಿಯನಾದ ಕವಿಯು ತನ್ನ ಕಾವ್ಯದಲ್ಲಿ ಔಚಿತ್ಯವರಿತು ಇವುಗಳನ್ನು ತರುತ್ತಾನೆ. ಇಲ್ಲಿ ನಾವು ನೋಡಬೇಕಾದದು ಕವಿಗೆ ನಿಜವಾದ ಸೌಂದರ್ಯಾನುಭೂತಿಯುಂಟೋ ಇಲ್ಲವೆ ಕೇವಲ ಪದ್ಧತಿಯೆಂದು ವರ್ಣಿಸುವನೋ ಎಂಬುದು. ನಮ್ಮ ಜನಪದಕವಿಗೆ ನಿಸರ್ಗ ಸೌಂದರ್ಯದಲ್ಲಿ ನಿಜವಾದ ಪ್ರೇಮವಿದೆ. ಹಾಗೂ ಅದನ್ನು ಮನಸೆಳೆಯುವ ರೀತಿಯಲ್ಲಿ ಹೇಳುವ ಶಕ್ತಿಯೂ ಎರಡೂ ಉಂಟು.

ಸಿಂಗಾರವ್ರಟಗೊಂಡು, ಸಿಂಗಾರ ವಿಟಗೊಂಡು
ಹೆಂಗಳಯರಾಗ ನಲಿನಲಿದು | ಅರಮನೆಯ
ಸಿಂಗಾರಸಾಲೆ ತುಂಬಿದರು ||

ಬಿಜ್ಜಮಹಾದೇವಿ || ೩೫ ||

ತರುಣಿಯರ ಅಂಗಾಂಗಗಳ ಹಾಗೂ ವಿವಿಧವಾದ ಆಭರಣಗಳ ವರ್ಣನೆಗಳನ್ನು ಮಾಡಿ ಸಾಧಿಸಬೇಕಾದ ಉದ್ದೇಶವನ್ನು ಈ ಒಂದೆರಡು ಸರಳವಾದ ನುಡಿಗಳಿಂದ ಸಾಧಿಸಿದ್ದಾನೆಂದು ನಾನು ಬಗೆಯುತ್ತೇನೆ ಈ ಪದ್ಯದಲ್ಲಿ ಸರಳತೆಯಿದೆ; ಸೌಂದರ್ಯವಿದೆ; ಧ್ವನಿಯಿದೆ; ಗಾಂಭೀರ್ಯವಿದೆ.

ಕಸುಕಾದ ದಾಳಿಂಬ, ರಸತುಂಬಿ ಒಡೆದಂತೆ
ನಸುಗೆಂಪು ಒಡೆದು ಮೂಡಲವು | ಶಿವಭಕ್ತಿ
ಹಸುಗೆಂಪು ಹರಿದು ಜಗತುಂಬಿ ||

ಬಿಜ್ಜಮಹಾದೇವಿ || ೮೪ ||

ಇದೊಂದು ಪ್ರಭಾತ ವರ್ಣನೆಯ ಅತ್ಯಂತ ಹೃದಯಂಗಮವಾದ ಒಂದು ರೀತಿ. ಪ್ರಭಾತ ವರ್ಣನೆಯನ್ನು ಅನೇಕ ಕವಿಗಳು ಅನೇಕರೀತಿಯಾಗಿ ಮಾಡಿದ್ದಾರೆ. ಆದರೆ ಇಲ್ಲಿ ಬರುವ ಅಲಂಕಾರವು ಎಷ್ಟು ನವೀನವೂ ಹೃದಯಂಗಮವೂ ಆಗಿದೆ ಎಂಬುದನ್ನು ನಾವು ಗಮನಿಸಬೇಕು.

" ಕಸುಕಾದ ದಾಳಿಂಬ, ರಸತುಂಬಿ ಒಡೆದಂತೆ
ನಸುಗೆಂಪು ಒಡೆದು ಮೂಡಲವು | "

ಎಂದು ಹೇಳುವ ಕವಿಯ ಹೃದಯ, ಸೌಂದರ್ಯದೃಷ್ಟಿ ಏನು ಸಾಮಾನ್ಯವಾದುವಲ್ಲ. ಇಂಥ ಒಂದೆರಡು ಸೌಂದರ್ಯ ಲಹರಿಗಳನ್ನು ಹರಿಯಿಸಬಲ್ಲ ಕವಿ ನಿಜವಾಗಿ ಧನ್ಯನು.

ಮುತ್ತಿನಾ ಜುಂಚಿಗಿಗೆ, ಒತ್ತಿ ಕುಸುರನು ತೆಗೆದು
ಸುತ್ತ ಮಣಿಕೆಚ್ಚಿ ಹೆಣೆದಿರುವ । ಹೊದಿಕೆಯೊಳು
ಬತ್ತಲೆಯ ಚಂದ್ರ ಕೂಸೇನೊ ॥

ಬಿಜ್ಜಮಹಾದೇವಿ ॥ ೪೧ ॥

ಇಲ್ಲಿ ಕೂಸಿನ ಬಣ್ಣನೆಯನ್ನು ನಾವು ಕಾಣುತ್ತೇವೆ. ಈ ಪದ್ಯವನ್ನು ಕುರಿತು ನಾವು ವಿಚಾರ ಮಾಡುತ್ತ ಹೋದಂತೆ ಅದರ ಅರ್ಥದ ವಿಶಾಲತೆಯೂ ಸುಭಗತೆಯೂ ನಮ್ಮ ಮನಸ್ಸಿಗೆ ಹೆಚ್ಚು ಹೆಚ್ಚು ಹೊಳೆಯುತ್ತ ಹೋಗುತ್ತದೆ. ಪದ್ಯದ ರಮಣೀಯತೆಯ ವಿವಿಧ ಸ್ವರೂಪಗಳನ್ನು ಎತ್ತಿ ತೋರಿಸುವ ಗೋಜಿಗೆ ಹೋಗದೆ ವಾಚಕರೇ ಅದರ ಅರ್ಥವನ್ನು ನಿದಿಧ್ಯಾಸ ಮಾಡಿ ಪದ್ಯವನ್ನು ಮೆಲಕು ಹಾಕುತ್ತ ಅದರ ಸೌಂದರ್ಯವನ್ನು ಸವಿಯಬೇಕೆಂದು ಬೇಡಿಕೊಳ್ಳುತ್ತೇನೆ. ಸುಂದರವಾದ ವರ್ಣನಾವೈಖರಿಯುಳ್ಳ ಒಂದೆರಡು ಪದ್ಯಗಳನ್ನು ಉಲ್ಲೇಖಿಸಿ ಇದೇ ರೀತಿಯಾಗಿ ವಾಚಕರು ತಮ್ಮ ಒಲವಿಗನುಸಾರವಾಗಿ ಬೇರೆ ಬೇರೆ ಪದ್ಯಗಳನ್ನು ಆರಿಸಿಕೊಳ್ಳಬಹುದೆಂದು ಸೂಚಿಸುತ್ತೇನೆ.

ಕಣ್ಣುಗುಲಗಂಜೇನ, ಬಣ್ಣ ಕಾರ್ಮೋಡೇನ
ಚೆನ್ನ ಮೈಕಟ್ಟು ಹುರಿಯೇನು । ಕಣ್ಣನಿಗೆ
ನುಣ್ಣನ್ನ ಮೀಸಿ ಬೇಡಗೇನು ॥

ಬೇಡರ ಕನ್ನಯ್ಯ ॥ ೪ ॥

ಮೂಡಲದ ಹೆಣ್ಣೊಡನೆ, ಆಡಿ ಓಕಳಿಯುಗ್ಗಿ
ಹೂಡಿ ರಥವೇರಿ ಹೊಡೆಯುತಲಿ । ಹೆಣ್ಣೊಡನೆ
ಜೋಡಾಗಿಬರುವ ಬಂಟ್ಯಾರೊ

ಬೇಡರ ಕನ್ನಯ್ಯ ॥ ೫೧ ॥

ತೊಟ್ಟಿಲದ ಸರಪಳಿಯು, ಬೊಟ್ಟು ಕುಂಕುಮದವರು
ಒಟ್ಟಾಗಿನಿಂತು ಜೋಯೆಂದು । ಗಲ್ಲಿಸಲು
ಬೊಟ್ಟಿತ್ತಿ ಶಿವನು ಆಡಿದನು ॥

ಬಿಜ್ಜಮಹಾದೇವಿ ॥ ೪೨ ॥

ಇದೇ ರೀತಿಯಾಗಿ ಸೌಂದರ್ಯಪೂರಿತವಾದ ವರ್ಣನೆಗಳ ಉದಾಹರಣೆ-ಗಳನ್ನು ಇನ್ನೂ ಹೆಚ್ಚು ಕೊಡಬಹುದು. ಆದರೆ ವಿಸ್ತಾರಭಯದಿಂದ ಇಲ್ಲಿಗೇ ನಿಲ್ಲಿಸಿ ಮುಂದಿನ ವಿಷಯಗಳ ಕಡೆಗೆ ತೆರಳಬೇಕಾಗಿದೆ.

ಈ ಹಾಡುಗಳಲ್ಲಿ ಇನ್ನೊಂದು ಎದ್ದು ಕಾಣುವ ವಿಷಯವೆಂದರೆ "ಕಿರಿದರೊಳು ಪಿರಿದುಮರ್ಥವನು" ಹೇಳುವ ಕವಿಯ ಜಾಣ್ಮೆ. ಕಥೆಯನ್ನು ಹೇಳುವಲ್ಲಿ, ವರ್ಣನೆಗಳನ್ನು ಮಾಡುವಲ್ಲಿ ಕವಿ ನಿಷ್ಕಾರಣವಾಗಿ ಎಲ್ಲಿಯೂ ಲಂಬಿಸುವದಿಲ್ಲ. ಕಥೆ ಸರಾಗವಾಗಿ ಓಡುತ್ತದೆ. ವರ್ಣನೆ ಹಿತಮಿತವಾಗಿವೆ. ಇದಕ್ಕೆ ಈ ಎಲ್ಲ ಹಾಡುಗಳಲ್ಲಿಯೂ ನಿದರ್ಶನಗಳಂಟು. ಬೇರೆ ಉದಾಹರಣೆಗಳ ಕಾರಣವೇ ಇಲ್ಲ. ಬಿಜ್ಜಮಹಾದೇವಿಯ ಹಾಡಿನಲ್ಲಿ ಬರುವ ಜೋಗಳಪದದ ಪದ್ಯಗಳು ಶಿವನ ಲೀಲೆಗಳನ್ನೆಲ್ಲ ಸಂಕ್ಷಿಪ್ತವಾಗಿ ಉಸರುತ್ತವೆ. ಬೇಡರ ಕನ್ನಯ್ಯನ ಕಥೆಯು ಕೇವಲ ೮೯ ಪದ್ಯಗಳಲ್ಲಿ ಮುಗಿದು ಹೋಗುತ್ತದೆ. ಆದರೂ ನಮಗೆ ಆ ಕಥೆ ಪೂರ್ಣವಾಗಿದೆಯೆಂಬ ತೃಪ್ತಿಯನ್ನು ಉಂಟು ಮಾಡುತ್ತದೆ.

ಕವಿಯಲ್ಲಿ ಇರಬೇಕಾದ ಇನ್ನೊಂದು ದೊಡ್ಡ ಗುಣವನ್ನು ಈ ಜನಪದ ಕವಿಯಲ್ಲಿಯೂ ನಾವು ಕಾಣುತ್ತೇವೆ. ಆ ಗುಣವೆಂದರೆ ಚಿತ್ರಣ ಶಕ್ತಿ. ಹೇಳುವ ವಿಷಯವು ಆಕಾರತಾಳಿ ನಮ್ಮ ಮನಶ್ಚಕ್ಷುವಿನೆದುರಿಗೆ ನಿಲ್ಲುವಂತೆ ಮಾಡುವಲ್ಲಿ ಈ ಕವಿ ನಿಪುಣನಿದ್ದಾನೆ.

ನುಡಿಸಿದನು ಡಮರಿಯನು, ಹೆಡೆಯೆತ್ತಿ ನಾಗಾಡಿ
ಜಡೆಯೊಳಗೆ ಗಂಗೆ ನೀರ್ಕಾರಿ । ಶೂಲ್ಹಿಡಿದು
ಬಿಡದೆತ್ತಿ ಶಂಖ ಊದಿದನು ॥

ಗೊಲ್ಲಾಳ ॥ ೬೮ ॥

ಇಲ್ಲಿ ಶಂಕರನ ಭವ್ಯಮೂರ್ತಿ ಹೇಗೆ ನಮ್ಮ ಕಣ್ಣುತುಂಬತ್ತದೆಂಬದನ್ನು ಅನುಭವಿಸಿ ನೋಡಬೇಕು.

ಬಿಲ್ಲವಿದ್ಯೆಯ ಬಂಟ, ಹುಲ್ಲಬೀಜಕೆ ಗುರಿಯು
ಮಲ್ಲವಿದ್ಯೆಯೊಳು ಭೀಮಯ್ಯ । ಕಣ್ಣಯ್ಯ
ಛಿಲ್ಲಭೂಪತಿಯು ಹೌದೇನು ॥

ಬೇಡರ ಕನ್ನಯ್ಯ ॥ ೫ ॥

ಈ ಪದ್ಯದಲ್ಲಿಯೂ ಹಿಂದೆ ಉಕ್ತವಾದ "ಕಣ್ಣುಗುಲಂಜೀನ" ಈ ಎರಡೂ ಪದ್ಯಗಳಿಂದ ಕನ್ನಯ್ಯನ ಮೂರ್ತಿಯು ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ಹೀಗೆ ಒಂದೆರಡು ಮಾತುಗಳಲ್ಲಿ ಒಂದು ಭವ್ಯಚಿತ್ರವನ್ನೇ ನಮ್ಮೆದುರಿಗೆ ಮೂಡಿಸುವದು ದೊಡ್ಡಕವಿಗೆ ಮಾತ್ರ ಸಾಧ್ಯ.

ಇದೇ ರೀತಿಯಾಗಿ ಈ ಹಾಡುಗಳಲ್ಲಿ ಕಾಣಬರುವ ಅನೇಕ ರೀತಿಯಾದ ಕಾವ್ಯಾಂಶವನ್ನು ಎತ್ತಿ ತೋರಿಸುತ್ತ ಹೋಗಬಹುದು. ಭಾಷೆಯ ಬೆಡಗು, ನವೀನ ಅಲಂಕಾರಗಳ ಪ್ರಯೋಗ, ಚಿತ್ರಣ ಶಕ್ತಿ, ಸ್ವಭಾವ ನಿರೂಪಣಾ ಸಾಮರ್ಥ್ಯ, ಭಕ್ತಿಯ ಅವೇಶ, ಭಾವಭಾಷೆಗಳ ಹೊಂದಿಕೆ, ಮಾನವನ ಮನೋವ್ಯಾಪಾರದ ಪರಿಜ್ಞಾನ ಹೀಗೆ ಮುಂತಾಗಿ ಕಾವ್ಯದಲ್ಲಿ ನಾವು ನೋಡಬೇಕಾದ ಅನೇಕ ಅಂಶಗಳು ಈ ಹಾಡುಗಳಲ್ಲಿ ಉದ್ದಕ್ಕೂ ಗೋಚರವಾಗುತ್ತವೆ. ಒಟ್ಟನಲ್ಲಿ ಒಂದೇ ಮಾತಿನಲ್ಲಿ ಹೇಳಬೇಕಾದರೆ ಇವನ್ನು ರಚಿಸಿದ ಜನಪದ ಕವಿ ನಿಜವಾದ ಕವಿಯೆಂಬುದು ಸ್ಪಷ್ಟವಿದೆ. ಇನ್ನು ಒಂದೇ ಒಂದು ಅಂಶದ ಉಲ್ಲೇಖಮಾಡಿ ಈ ವಿಷಯವನ್ನು ನಿಲ್ಲಿಸುತ್ತೇನೆ. ಬಿಜ್ಜಮಹಾದೇವಿ ತನ್ನ 'ಶಿವಗೂಸು' ರೋಗದಿಂದ ನೆಟ್ಟಗಾಗುವದಿಲ್ಲವೆಂದು ಮನಗಂಡು ಹೌಹಾರಿ, ಉಪ್ಪರಿಗೆಮೇಲಿಂದ ಹಾರಿಕೊಳ್ಳುವ ಸನ್ನಿವೇಶವನ್ನು ಕವಿ ಎಷ್ಟು ಹೃದಯಂಗಮವಾಗಿ ವರ್ಣಿಸಿದ್ದಾನೆಂಬುದನ್ನು ಇಲ್ಲಿ ಉಲ್ಲೇಖಿಸದಿರಲಾರೆ.

ಗೋ! ಹಾರಿದೆನು ಶಿವನೆ, ಛಿ! ಹೋಗಲೀಜೀವ
ಭೋ! ಹೇಳೆಂದು ಉಪ್ಪರಗಿ | ಮೇಲಿಂದ
ಹಾ! ಹೋಕಾಲವೆ ಶಿವಲಿಂಗ ||

ಬಿಜ್ಜಮಹಾದೇವಿ || ೭೮ ||

ಇಲ್ಲಿ ಗೋ! ಛೀ! ಭೋ! ಹಾ! ಎಂಬ ಉದ್ಗಾರಗಳನ್ನು ಎಂಥ ಸಮುಚಿತವಾದ ರೀತಿಯಲ್ಲಿ ಉಪಯೋಗ ಮಾಡಿದ್ದಾನೆಂಬದನ್ನು ನಾವು ಗಮನಿಸಬೇಕು. ಈ ಒಂದು ಪದದಿಂದ ಆ ತಾಯಿ ಶರಣೆಯ ಉದ್ವಿಗ್ನತೆಯೂ ಗಾಬರಿಯೂ ಹೇಗೆ ನಮ್ಮ ಮನಸ್ಸನ್ನು ತಟ್ಟಿ ಚುಚ್ಚುತ್ತವೆ ಎಂಬದನ್ನು ನೋಡಬೇಕು. ಎಲ್ಲವನ್ನು ಸಮಾಲೋಚಿಸಲಾಗಿ ಈ ಹಾಡುಗಳಲ್ಲಿ ಕಾವ್ಯಗುಣಗಳು ಹೇರಳವಾಗಿ ತುಂಬಿವೆ. ಇದಲ್ಲದೆ ಉತ್ತರ ಕರ್ನಾಟಕದ

ಒಕ್ಕಲಿಗರ ಜೀವನಕ್ಕೆ ಸಂಬಂಧಸಿದ ಅನೇಕ ಅಂಶಗಳೂ ಉಲ್ಲೇಖಿತವಾಗಿವೆ. ಹರಿಶ್ಚಂದ್ರ ಗಾಳಿ, ರಾಸಿಗಾಳಿ, ಕೋಳೂರ ಕಡೆಯಗಾಳಿ, ಕಣಕದರಾಸಿ, ಕಡೆರಾಸಿ, ಸುಂಕರಾಶಿ, ಜಂತೆಗುಂಟಿ, ಹಂತಿ, ಹುಲುಸು, ಹುಲ್ಲುಲ್ಲಿಗೊ ಮೊದಲಾದ ಒಕ್ಕಲತನಕ್ಕೆ ಸಂಬಂಧ ಪಟ್ಟ ವಿಷಯಗಳು ಮೇಲಿಂದ ಮೇಲೆ ಬರುತ್ತವೆ.

ಇಂಥ ಸುಂದರವಾದ ಹಾಡುಗಳ ಸಂಕಲನವನ್ನು ಕನ್ನಡ ಜನತೆಗೆ ಕಾಣಿಕೆಯಾಗಿ ಕೊಟ್ಟದ್ದಕ್ಕಾಗಿ ನನ್ನ ಮಿತ್ರರಾದ ಶ್ರೀ. ಗದ್ದಗಿಮಠ ಅವರಿಗೆ ಮತ್ತೊಮ್ಮೆ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಅವರು ಸೇಖರಿಸಿದ ಇನ್ನೂ ಅನೇಕ ಹಾಡುಗಳು ಕಾಲಕಾಲಕ್ಕೆ ಪ್ರಕಟವಾಗಿ ಕನ್ನಡ ಸಾಹಿತ್ಯ ಭಕ್ತರನ್ನೂ ರಸಿಕರನ್ನೂ ಸಂಸ್ಕೃತಿ ಅಭ್ಯಾಸಿಗಳನ್ನೂ ತಣಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಇವರು ಕೈಕೊಂಡ ಕೆಲಸ ಸುಲಭವಾದದ್ದಲ್ಲ ಎಂಬ ಅರಿವು ನನಗೆ ಸಂಪೂರ್ಣವಾಗಿದೆ. ಹಾಡುಗಳನ್ನೆಲ್ಲ ಕೂಡಿಸಿ, ಸಂಕಲಿಸಿ ಪ್ರಕಟಿಸುವದೆಂದರೆ ಅದೆಷ್ಟು ಶ್ರಮಸಾಧ್ಯವೆಂದು ಬೇರೆ ಹೇಳಬೇಕಾಗಿಲ್ಲ. ಹಾಗೆ ನೋಡಿದರೆ ಇದು ಒಬ್ಬರೇ ಮಾಡುವ ಕೆಲಸವಲ್ಲ. ಜನಪದಸಾಹಿತ್ಯ ಸಂಕಲನವು ಸಾರ್ವಜನಿಕಸಂಸ್ಥೆಗಳೂ ವಿಶ್ವವಿದ್ಯಾಲಯ ಮೊದಲಾದ ಶಿಕ್ಷಣ ಸಂಸ್ಥೆಗಳೂ ಕೈಕೊಳ್ಳಬೇಕಾದ ಕಾರ್ಯ. ಶ್ರೀ. ಗದ್ದಗಿಮಠ ಅವರು ಈ ಕಾರ್ಯವನ್ನು ಕೈಕೊಂಡದ್ದು ಸ್ತುತ್ಯ. ಇದಕ್ಕೆ ಎಲ್ಲರೀತಿಯಿಂದಲೂ ಪ್ರೋತ್ಸಾಹಕೊಟ್ಟು ಇನ್ನು ಮುಂದೆ ಅವರಿಂದ ಈ ಬಗೆಯ ಹೆಚ್ಚು ಕಾರ್ಯವನ್ನು ಮಾಡಿಸಿಕೊಳ್ಳುವದು ಕನ್ನಡ ಮಹಾಜನರ ಭಾರ.

ಲಿಂಗರಾಜ ಕಾಲೇಜ ಬೆಳಗಾಂವಿ. ಶ್ರೀ. ಬಿ. ಕುಲಕರ್ಣಿ

೧೫-೩-೫೨



# ಅರಿಕೆ



ಜನಪದಸಾಹಿತ್ಯವು ಕರ್ನಾಟಕದಲ್ಲಿ ಅನೇಕ ಮುಖಗಳಲ್ಲಿ ಕಂಡು ಬರುವದು. ಬೀಸುವ ಹಾಡು, ಒನಕೆಯ ಹಾಡು, ಬೆಳದಿಂಗಳದಲ್ಲಿ ಕೋಲಿನ ಹಾಡು, ಹೋಳಿಯ ಹಾಡು, ಸುಗ್ಗಿಯಲ್ಲಿ ಹಂತಿಯ ಹಾಡು, ಸಮುದ್ರತೀರಗಳಲ್ಲಿ ಡೋಣಿಯ ಹಾಡು, ಜಾತ್ರೆ ಮಹೋತ್ಸವಗಳಲ್ಲಿ ಲಾವಣಿಯ ಹಾಡು, ಪರಸಿಗಳಲ್ಲಿ ದುಂದುಭಿ ಹಾಡು, ಕೆಲವು ಹಬ್ಬ ಹುಣ್ಣಿವೆಗಳಲ್ಲಿ ಗೊಂದಲಿಗರ ಗೊಂದಲಹಾಡು, ಹೆಣ್ಣು ಮಕ್ಕಳ ಗೌರಿ ಸೀಗೆಯ ಹಾಡು, ಲಗ್ನ ಮುಹೂರ್ತಗಳಲ್ಲಿ ಸೋಬಾನ ಹಾಡು, ಶಿವರಾತ್ರಿ ಯುಗಾದಿಗಳಲ್ಲಿ ಕಂಬಿಯ ಹಾಡು, ಪುಣ್ಯತಿಥಿಗಳಲ್ಲಿ ವಿಶೇಷವಾಗಿ ಶ್ರಾವಣಮಾಸದಲ್ಲಿ ಹಳ್ಳಿಯ ಹರದೆಯರು ಅನೇಕ ದಿನಗಳವರೆಗೆ ಹಾಡುವ ಶಿವಶರಣರ ಹಾಡುಗಳು, ಮಹಾಭಾರತ, ರಾಮಾಯಣ ಇವೇ ಮೊದಲಾದವುಗಳನ್ನು ನಾವು ಕಾಣಬಹುದು. ಇದು ಬಲುಹುಲುಸಾದ ಸಾಹಿತ್ಯ. ಇದರ ಆದಿಅಂತ್ಯಗಳನ್ನು ಅರಿಯುವದು ಬಲುಕಷ್ಟ. ಜನಾಂಗದೊಡನೆ ಹುಟ್ಟಿ ಜನಾಂಗದೊಡನೆ ಒಂದೇ ಸವನೆ ಹರಿದು ಬಂದ ಸಾಹಿತ್ಯವಿದು. ನಿತ್ಯದ ಪ್ರಪಂಚವು ಇದ್ದಕ್ಕಿದ್ದಂತೆ ಒಡಮೂಡಿದ್ದು ಜನಪದ ಸಾಹಿತ್ಯದಲ್ಲಿ. ಇದಕ್ಕೆ ವೇಷ ಭೂಷಣಗಳಿಲ್ಲ. ಪಂಡಿತರು ಕೈಕೊಂಡ ಲಕ್ಷಣಗಳ ಕಟ್ಟುನಿಟ್ಟುಗಳಿಲ್ಲ. ಕನ್ನಡವೇ ತನ್ಮಯವಾಗಿ ಓದುಬರಹವನ್ನರಿಯದ ಗಾವಿಲರ ಲಹರಿಯ ಝರಿಯಲ್ಲಿ ಒಂದೇ ಸವನೆ ಧಾರಾಳವಾಗಿ ಪ್ರವಹಿಸುತ್ತ ಬಂದಿದೆ. ಕನ್ನಡ ಮನೆಮಾತುಗಳು ಸಹಜವಾಗಿ ಪೋಣಿಸಲ್ಪಟ್ಟು, ರಾಗವನ್ನೊಳಗೊಂಡು ಕಿವಿಗೆ ಅತಿ ಇಂಪಾಗಿ ಕೇಳಬರುವದು. ತ್ರಿಪದಿಯು ಇದಕ್ಕೆ ಛಂದಸ್ಸಾಗಿ ಬ್ರಹ್ಮಗಣವನ್ನೊಳಗೊಂಡಿರುವದರಿಂದ ಏರಿಳಿತೆಗಳ ಕೋಚನ್ನೆತ್ತಿ ರಾಗಮಾಡಿ ಹಾಡಲು ಬರುವದು.

ಬೆಳವಲನಾಡಿನ ಹಂತಿಗಳೆಂದರೆ ನೂರಾರು ಚೀಲಗಳ ರಾಶಿ. ಸುಗ್ಗಿಯ ಸೊಬಗನ್ನು ಕಾಣಬೇಕು ಬೆಳವಲದಲ್ಲಿ. ನೂರು ಎತ್ತುಗಳ ಮೇಟಿಯ ಕಣಗಳನ್ನು ನೋಡಿದರೆ, ಮಲೆನಾಡಿನವರಿಗೆ ದಂಗುಬಡಿಯದೆ ಇರದು. ಇದು ಸುಗ್ಗಿ. ರೈತನ ದೊಡ್ಡ ಹಬ್ಬ. ಕಾಡಸಿರಿ ನಾಡ ತುಂಬಿ ತಣಿಸುವ

ದಿನ. ಅಂದಿನ ರಾತ್ರಿಯಂದರೆ ಬೆಳವಲ ರೈತನಿಗೆ ಅಮೃತದಿನ. ರಾತ್ರಿಯಲ್ಲಿ ಹಂತಿಯನ್ನು ಹೂಡಿದ ರೈತನು ಎತ್ತುಗಳ ದಣಿವನ್ನು ಹಿಂಗಿಸಲು ಹಲಗೆಯನ್ನು ನುಡಿಸಿಯೊ, ಪಪ್ಪ ಬಾರಿಸಿಯೊ, ಡೊಳ್ಳಿನೊಡನೆ ಕುಣಿದೊ ಹಾಡುವ ನೋಟ ಬಲು ರಮ್ಯವಾದುದು. ಬೆಳವಲ ರೈತರು ಈ ಹಂತಿಯ ಹಾಡುಗಳನ್ನು ಬೆಳಗು ಹರಿಯುವವರೆಗೂ ಹಾಡುವರು. ಆ ನಿರಭ್ರ ರಾತ್ರಿಯ ಈ ಹಂತಿಯ ಹಾಡುಗಳು ಕಿವಿಗೆ ಮಂಜುಳವಾಗಿ ಕೇಳಬರುವವು. ನನ್ನ ತಂದೆಯು ಹಾಡುತ್ತಿದ್ದ ಅನೇಕ ಶಿವಶರಣರ ಹಂತಿಯ ಹಾಡುಗಳು ನನ್ನ ಎಳೆವಯಸ್ಸಿನಲ್ಲಿಯೇ ನನ್ನ ಮನಸ್ಸನ್ನು ಹಿಡಿದವು. ನನ್ನ ಬುದ್ಧಿ ಬಲಿತ ಮೇಲೆ ಸಹ, ನನ್ನ ತಂದೆ ಹಾಡುವದನ್ನು ಕೇಳಿ ನಾನೂ ಹಾಡಿ ತಣಿಯುತ್ತ ಬಂದೆ. ಬರಬರುತ್ತ, ಇವು ನನ್ನ ಮನಸ್ಸನ್ನು ಬಹಳ ಸೆಳೆಯ ಹತ್ತಲು ಇವುಗಳ ಸಂಕಲನ ಕಾರ್ಯವನ್ನು ಕೈಕೊಂಡೆ. ಕಾವ್ಯಕ್ಕೆ ಸರಿಗಟ್ಟುವ ಸಾವಿರಾರು ಪದ್ಯಗಳನ್ನು ಸಂಕಲನ ಮಾಡುತ್ತ ಬಂದೆ. ಮನೆಯಲ್ಲಿ ತಂದೆಯು ಹಾಡುವ ಕೆಲವು ಶಿವಶರಣರ ಹಂತಿಯ ಹಾಡುಗಳನ್ನೂ ಮಹಾಭಾರತ, ರಾಮಾಯಣ ಮೊದಲಾದವುಗಳನ್ನೂ ನನ್ನ ತಾಯಿಯು ಜನಪದನೊಂದು ಧಾಟಿಯಲ್ಲಿ ತನ್ನ ಮೂವರು ಗೆಳತಿಯರೊಡಗೂಡಿ ಹಾಡುವಳು. ಅವುಗಳಲ್ಲಿ ಅವರು ರಸವತ್ತಾಗಿ ಹಾಡುವ ಮೂರು ಸಾವಿರ ಪದ್ಯಕ್ಕೆ ಮಿಕ್ಕುವ 'ಮಹಾಭಾರತವನ್ನು' ಸಂಕಲನ ಮಾಡಿರುವೆನು. ಹೆಚ್ಚು ಪರಿಶ್ರಮಮಾಡಿ ಪರಿಶೋಧಿಸಲು ಚಿತ್ರ ವಿಚಿತ್ರವಾದ ಅನೇಕ ಸಂಗತಿಗಳು ನನ್ನ ನಿದರ್ಶನಕ್ಕೆ ಬಂದವು ಅವುಗಳನ್ನು ಬಚ್ಚಿಡದೆ ಜನತೆಯ ಮುಂದೆ ಇಡಬೇಕೆಂದು ಮಾಡಿದ ಪ್ರಯತ್ನವೆ ಈಗ ಬೆಳಕಿಗೆ ಬರುತ್ತಿರುವ ಈ ಹಾಡುಗಳು

**ಈ ಹಾಡುಗಳ ಪರಂಪರೆ :—**

ಹಾಡುಗಬ್ಬಗಳನ್ನು ಹಾಡುವ ಸಾಂಪ್ರದಾಯವು ನಮ್ಮ ಮನೆತನದಲ್ಲಿ ಪರಂಪರೆಯಾಗಿ ಬಂದಿದೆ. ನಾನು ಸಣ್ಣವನಿರುವಾಗ ನಮ್ಮ ಮಠದಲ್ಲಿ ನನ್ನ ತಂದೆಯ ತಾಯಿಯ ತಂಗಿಯು ಅನೇಕ ಶಿವಶರಣರ ಹಾಡುಗಳನ್ನೂ ಮಹಾಭಾರತ, ರಾಮಾಯಣ ಮೊದಲಾದ ಹಾಡುಗಳನ್ನೂ ಶ್ರಾವಣ, ದಿಪಾವಳಿ ಮೊದಲಾದ ಪವಿತ್ರದಿನಗಳಲ್ಲಿ ಜನನಪದದ ನೂರೊಂದು ರಾಗಗಳಲ್ಲಿ ಹಾಡಿ ಜನರನ್ನು ತಣಿಸುತ್ತಿದ್ದಳು. ಅವಳೊಬ್ಬ ಮಹಾಶರಣಿ. ಚಿಕ್ಕವಳಿರುವಾಗ

ವೈಧವ್ಯ ಪ್ರಾಪ್ತವಾಗಲು ನನ್ನ ತಂದೆಯ ತಾಯಿಯು ಬಳಿಯಲ್ಲಿಯೇ ಉಳಿದಳು. ನನ್ನ ಅಜ್ಜಿಯು ಓದುಬರಹವನ್ನು ಕಲಿಯದಿದ್ದರೂ ಅನುಭಾವಿಯಾಗಿದ್ದಳು. ನಮ್ಮ ಮನೆತನದ ಸಂಸ್ಕೃತಿಯ ಪರಂಪರೆಯಂತೆ ಅವಳು ತನ್ನಗಂಡನಿಂದ (ನನ್ನ ಅಜ್ಜ) ವಚನಶಾಸ್ತ್ರ, ಶಿವಶರಣರ ಪುರಾಣ ಚರಿತೆಗಳನ್ನು ಅರಿತುಕೊಂಡು ತನ್ನ ತಂಗಿಗೆ ಅವುಗಳನ್ನು ಹಾಡಿನ ರೂಪದಿಂದ ಹೇಳುತ್ತಿದ್ದಳೆಂದು ನನ್ನ ತಂದೆ ಹೇಳುತ್ತಿದ್ದರು. ನಮ್ಮಲ್ಲಿಯ ಹೆಣ್ಣುಮಕ್ಕಳು ಇವರಿಬ್ಬರ ಗುಣಗಾನವನ್ನು ಪೂಜ್ಯತೆಯಿಂದ ಈಗಲೂ ಮಾಡುವದುಂಟು. ಮುಂದೆ ಅವರ ದುರ್ದೈವದ ಮೂಲಕ ನನ್ನ ತಂದೆಯು ಹುಟ್ಟಿದ ಆರೇತಿಂಗಳಲ್ಲಿ ನನ್ನ ಅಜ್ಜನು ಕೈಲಾಸವಾಸಿಯಾಗಲು, ದುಃಖದಲ್ಲಿ ನನ್ನ ಅಜ್ಜಿಗೆ ಏನೂ ತಿಳಿಯದಂತಾಯಿತು. ಆದರೂ ಮನೆತನದ ಭಾರವನ್ನು ಹೊತ್ತು ಆರುತಿಂಗಳಮಗು, ನನ್ನತಂದೆಯನ್ನೂ ಚಿಕ್ಕವಳಾದ ತನ್ನ ತಂಗಿಯನ್ನೂ ಬೆನ್ನಿಗೆ ಕಟ್ಟಿಕೊಂಡು ವನವಾಸ ತಗೆಯಹತ್ತಿದಳು. ನನ್ನ ತಂದೆಯು ತನ್ನ ಚಿಕ್ಕವ್ವನ ಬಳಿಯಲ್ಲಿಯೇ ಲಾಲನಪಾಲನ ಹೊಂದಿ ಬೆಳೆದು ದೊಡ್ಡವರಾದರು. ಮುಂದೆ ಮನೆತನ ಭಾರವಹಿಸಿದ ನನ್ನ ತಂದೆಯ ತಾಯಿಯೂ ಕೈಲಾಸವಾಸಿಯಾದಳು. ವಯಕ್ಕೆ ಬಂದ ನನ್ನ ತಂದೆ ತನ್ನ ಚಿಕ್ಕವ್ವನ ಕೃಪಾದೃಷ್ಟಿಯಲ್ಲಿ ಮನೆತನ ನಡೆಸುತ್ತ ಬಂದರು. ತಾನು ಕೂಸಿರುವಾಗಲೇ ತಂದೆಯನ್ನು ಕಳಕೊಂಡ ನನ್ನ ತಂದೆಗೆ ಆಗಿನ ಕಾಲದಲ್ಲಿ ಓದುಬರಹ ಕಲಿಯಲು ಅನಕೂಲವಾಗಲಿಲ್ಲ. ಶಿವಶರಣೆಯಾದ ತನ್ನ ಚಿಕ್ಕವ್ವನ ಬಳಿಯಲ್ಲಿಯೇ ಬೆಳೆದು, ಅವಳ ಸಂಸ್ಕೃತಿಯನ್ನುಂಡು ಓದು ಬರಹವನ್ನು ಕಲಿಯದಿದ್ದರೂ ಅವಳಿಂದ ವಚನಶಾಸ್ತ್ರ, ಶಿವಶರಣರ ಕಥೆಪುರಾಣಗಳನ್ನರಿತು ನಿಪುಣರಾದರು. ನನ್ನ ತಂದೆಯ ಹೊಟ್ಟೆಯಲ್ಲಿ ನಾವು ಹುಟ್ಟಿದನಂತರ ನಮ್ಮ ಪುಣ್ಯದ ಬಲದಮೂಲಕ ನನ್ನ ತಂದೆಯ ಚಿಕ್ಕವ್ವನು ನೂರುವರುಷದವಳಾಗಿ ಕೈವಲ್ಯ ಹೊಂದಿದಳು. ಇವಳು ಹಾಡಿದ್ದು ಸಣ್ಣವನಿರುವಾಗ ನಾನು ಕೇಳಿದ್ದೆ. ಆಗ ನನಗೆ ಹತ್ತುವರುಷ. ಮುಂದೆ ನನ್ನ ತಂದೆಯು ತನ್ನ ಚಿಕ್ಕವ್ವನ ಆಶೀರ್ವಾದದ ಬಲದಿಂದ ಹಾಡು ಗಳನ್ನು ಹಾಡಹತ್ತಿದ್ದಲ್ಲದೆ ಸ್ವತಃ ಅನೇಕ ಶಿವಶರಣರ ಚರಿತೆಗಳನ್ನು ಸುಗ್ಗಿಯ ಕಾಲದಲ್ಲಿ ಹಂತಿಯ ಹಾಡರೂಪವಾಗಿ ಹಾಡುತ್ತ ಬಂದರು. ಇದು ತನಗೆ ತನ್ನ ಚಿಕ್ಕವ್ವನ ಆಶೀರ್ವಾದವೆಂದು ನನಗೆ ಹಗಲೆಲ್ಲ

ಹೇಳುತ್ತಿದ್ದರು. ನಮ್ಮ ಭಾಗದ ಅನೇಕ ಹಳೇ ರೈತರು ನನ್ನ ತಂದೆಯ ಹಾಡುಗಳನ್ನು ಕೇಳಿಕೊಂಡು ಕಲಿತು ಹಾಡುತ್ತಿದ್ದರು. ಆದರೆ ನಮ್ಮ ದುರ್ದೈವದ ಮೂಲಕವಾಗಲಿ, ಈಗಿನ ಜನರ ವಿಚಿತ್ರ ಭಾವನೆಗಳ ಮೂಲಕ ವಾಗಲಿ, ಅಥವಾ ಇಂದಿನ ವಿಜ್ಞಾನ ಯುಗದ ಸಂಪರ್ಕದಿಂದಾಗಲಿ ಈ ಹಾಡುಗಳು ನಮ್ಮ ಭಾಗದಲ್ಲಿ ಮರೆಯು ಹತ್ತಿ, ಒಂದೊಂದು ಬಿಡಿ ಬಿಡಿ ಪದ್ಯಗಳಾಗಿ ಈಗ ಹರಕುಮುರುಕಾಗಿ ಹೋಗಿವೆ.

ಮೊದಲಿನಿಂದಲೂ ನನ್ನ ತಂದೆಯಿಂದ ಈ ಹಾಡುಗಳನ್ನು ಕೇಳುತ್ತ ಬಂದ ನನಗೆ ಅವುಗಳನ್ನು ಕಲಿಯುವ ಬುದ್ಧಿ ಸ್ವಾಭಾವಿಕವಾಗಿ ಹುಟ್ಟಿತು. ಹಳ್ಳಿಯಲ್ಲಿರುವಾಗ ಅವುಗಳನ್ನು ಕಲಿತು ಹಾಡುತ್ತಿದ್ದೆ. ತಾನು ಓದು ಬರಹವನ್ನು ಕಲಿಯದ್ದಕ್ಕೆ ನನ್ನ ತಂದೆಯು ಬಲು ವ್ಯಥೆಪಟ್ಟು, ತನ್ನ ಎಲ್ಲ ಮಕ್ಕಳು ಕಲಿಯಲೆಂದು, ಓದುಬರಹವನ್ನು ಕಲಿಯಲು ಅನಕೂಲ ಮಾಡಿ ಕೊಟ್ಟರು. ಆಂಗ್ಲವಿದ್ಯಾಭ್ಯಾಸದ ಸೆಳಪಿಗೆ ಬಿದ್ದ ನಾನು ನನ್ನ ತಂದೆಯ ಹಾಡುಗಳ ಆಳನ್ನರಿತು ಅವುಗಳನ್ನು ಸಂಕಲನ ಮಾಡಬೇಕೆಂದು ಮನಸ್ಸಿನಲ್ಲಿ ಮಾಡಿದೆ. ಆದರೆ ನನ್ನ ಅಭ್ಯಾಸವಲ್ಲಿ ಬಿಡುವು ಸಿಕ್ಕದಮೂಲಕ ಕಾಲವು ಹಾಗೆಯೇ ಗತಿಸಿ ಹೋಯಿತು. ೧೯೪೩ ಇಸವಿಯಲ್ಲಿ ನಾನು ಬಿ. ಎ. ಪಾಸಾದ ಬಳಿಕ ಬಿಡುವು ಸಿಗಲು ನನ್ನ ೨೨ ನೆಯ ವಯಸ್ಸಿನಿಂದ ಅಂದರೆ ೧೯೪೩ ನೆಯ ಇಸವಿಯಿಂದ ಈ ಹಾಡುಗಳನ್ನು ನಾನು ಸಂಕಲನ ಮಾಡುತ್ತ ಬಂದೆ. ಕೆಲವು ದಿನಗಳಾದ ಮೇಲೆ ಮನೆತನದ ಅಡಚಣೆಗಳ ಮೂಲಕ ನವಕರಿಯಲ್ಲಿ ಸೇರಿದ ನನಗೆ ಮತ್ತೆ ಎಡರು ತೊಡರುಗಳು ಬಂದು ಸಂಕಲನೆಗೆ ತಡೆಯಾಯಿತು. ಮುಂದೆ ಹಲಕೆಲವು ಹಾಡುಗಳನ್ನು ಬಿಡುವು ಸಿಕ್ಕಾಗ ಸಂಕಲನ ಮಾಡುತ್ತಿರಲು, ನನ್ನ ದುರ್ದೈವದ ಮೂಲಕ ಫೇಬ್ರುವರಿ ೧೯೪೯ ನೆಯ ಇಸವಿಯಲ್ಲಿ ನನ್ನ ತಂದೆಯು ತನ್ನ ೮೦ ನೆಯ ವಯಸ್ಸಿನಲ್ಲಿ ಸ್ವರ್ಗಸ್ಥರಾದರು. ಅಂದೇ ಈ ಹಾಡುಗಳ ಪರಂಪರೆಯು ನಮ್ಮ ಮನೆತನದಲ್ಲಿ ಮುಳುಗಿಹೋಯಿತೆಂದು ಬರೆಯಲು ನನಗೆ ಖೇದವೆನಿಸುವದು. ದೇವರ ಕೃಪೆ ತಪ್ಪಿದಮೂಲಕ ಅವರು ಹಾಡುವ ಎಲ್ಲ ಪುರಾತರ ಹಾಡುಗಳನ್ನು ಸಂಕಲನ ಮಾಡಲು ಆಗಲಿಲ್ಲವೆಂದು ಹೇಳಲು ನನಗೆ ಅತಿ ದುಃಖವೆನಿಸುವದು.

ನನ್ನ ಸುದೈವದ ಮೂಲಕ ನನ್ನ ಅಜ್ಜಿಯ ಮತ್ತು ತಂದೆಯ ಹಾಡುಗಳನ್ನು ಕೇಳಿ, ಆದೇಸಂಸ್ಕೃತಿಯ ಪರಂಪರೆಯಲ್ಲಿ ದಿನಗಳೆದ ನನ್ನ ತಾಯಿಯು ಮತ್ತು ಅವಳ ವಯೋವೃದ್ಧ ಗೆಳತಿಯರು ಮಹಾಭಾರತ, ರಾಮಾಯಣ, ಗುಣಿಸಾಗರಿ, ಸತ್ಯಗಂಡನ ಪಡೆದ ಚೆನ್ನವ್ವ ಮೊದಲಾದ ಶಿವಶರಣರ ಹಾಡುಗಳನ್ನು ಹಾಡುವರು. ಇವರು ಹಾಡುವ 'ಜನಪದ ಭಾರತ'ವನ್ನು ಸಂಕಲನ ಮಾಡಿರುವೆನೆಂದು ಹಿಂದೆ ಹೇಳಿದ್ದೇನೆ ಇವರ ವ್ಯಕ್ತಿತ್ವವನ್ನು ಇವರ ಹಾಡುವ 'ಜನಪದ ಭಾರತ' ವನ್ನು ಬೆಳಕಿಗೆ ತರುವಾಗ ಬರೆಯಬೇಕೆಂದು ಮೀಸಲಿಟ್ಟಿದ್ದೇನೆ. ಅಲ್ಲದೆ ಇವರು ನನ್ನ ತಂದೆಯ ಕೆಲವು ಹಂತಿಯ ಹಾಡುಗಳನ್ನು ಶಿವನಸೊಲ್ಲುಗಳ ಪಲ್ಲವಿಗಳಲ್ಲಿ ಜೋಡಿಸಿ, ಜನಪದವ ನೂರೊಂದು ರಾಗಗಳಲ್ಲಿ ಹಾಡುವವನ್ನು ನಾವು ಕೇಳಬಹುದು. ಈಗ ಪುಸ್ತಕರೂಪವಾಗಿ ಬಂದ ನಾಲ್ಕು ಮುಗ್ಧ ಶರಣರ ಹಾಡುಗಳನ್ನು ಸನ್ನಿವೇಶಕ್ಕೆ ಸರಿಯಾಗಿ ಕೆಳಗಿನ ಪಲ್ಲವಿಗಳನ್ನು ಹಾಕಿ ಹಾಡುವರು. ಹೆಣ್ಣುಮಕ್ಕಳ ಹಿಮ್ಮೇಳವು ಅವರ ಹಿಂದೆ ಪಲ್ಲವಿಗಳ 'ಸೋ' ಎತ್ತುವದು

**ಈ ಪುಸ್ತಕದಲ್ಲಿಬಂದ ಹಾಡುಗಳಿಗೆ ಬಳಸುವ ಪಲ್ಲವಿಗಳು :—**

೧. ಶಿವಧೋಹರ ಶಿವಧೋ ||
೨. ಶಿವಲಿಂಗವೆ ಶಿವಭಜನೆ ||
೩. ಶಿವನೆ, ಶರಣರ ಶಿವಕಾಯಕ ||
೪. ಶಿವನೆ ಶಿವನೆ, ಕೈಲಾಸ ಶಿವನೆ ಶಿವಲಿಂಗ ಶಿವನೆ ||
೫. ನಾಗಭೂಷಣನವ್ವ, ಶಿವಗಣದೊಡೆಯನು ||
೬. ಸುವ್ವೀ ಬಾ ಸುವ್ವೀ, ಶರಣರ ಸುವ್ವೀ ||
೭. ಕೋಳಿ ಕೂಗುವಾಗ, ಬೆಳಗಾಗುವಾಗ ||
೮. ಸಾಗಿಸದ್ಗುರು ಯೋಗಿಬಂದರ ಹೋಗಿನೋಡುಣ,
ಗುರುಮೋಕ್ಷವ ಬೇಡುಣ ||

ಮೊದಲಾದ ಈ ಶಿವಸೊಲ್ಲುಗಳ ಪಲ್ಲವಿಗಳನ್ನು ಅವರ ಹಾಡುಗಳ ಮುಖಾಂತರ ಕೇಳಿಯೇ ತಣಿಯ ಬೇಕಲ್ಲದೆ ಇಲ್ಲಿ ಬರೆಯಲಸಾಧ್ಯ. ಈ ಹಾಡುಗಳು ತ್ರಿಪದಿಗಳಲ್ಲಿವೆ. ಆದುದರಿಂದ ಕರ್ನಾಟಕದ ಯಾವದೇ ಭಾಗದಲ್ಲಿಯ ಹೆಣ್ಣುಮಕ್ಕಳು, ತಮಗೆ ಗೊತ್ತುಳ್ಳ ಜನಪದ ಪಲ್ಲವಿಗಳನ್ನು

ಸಹಜವಾಗಿ ಕೂಡಿಸಿ, ಈ ಹಾಡುಗಳನ್ನು ಹಾಡಬಹುದು. "ಕೋಲು ಕೋಲ" "ರನ್ನದ ಕೋಲು ಕೋಲೆನ್ನ ಕೋಲ" ಮೊದಲಾದ ಕೋಲು ಪಲ್ಲವಿಗಳನ್ನಾಗಲಿ, ಮತ್ತೆ ಬೇರೆ ಯಾವೇ ಪಲ್ಲವಿಗಳನ್ನಾಗಲಿ ಹಾಕಿ ಹಾಡಲು ಬರುವದು. ಈ ಹಾಡುಗಳನ್ನು ವಿಶೇಷವಾಗಿ ಶ್ರಾವಣ ಮಾಸ ದಿಂದ ದೀಪಾವಳಿಯ ವರೆಗೆ ಭಕ್ತಿಯಿಂದ ಹಾಡುವ ವಾಡಿಕೆಯುಂಟು. ಇದಲ್ಲದೆ, ಹಾಡುಬಲ್ಲ ಕೆಲವು ಹೆಣ್ಣುಮಕ್ಕಳು ಈ ಹಾಡುಗಳನ್ನು ಬೇಸಿಗೆ ಯಲ್ಲಿ ಹತ್ತಿಯ ಹೊಲಗಳಲ್ಲಿ ಹತ್ತಿಯ ಬಿಡಿಸುವಾಗಾಗಲಿ, ಅಥವಾ ಗೋದಿಯ ಹೊಲಗಳಲ್ಲಿ ಗೋದಿಯ ಕೀಳುವಾಗಾಗಲಿ ದಣಿವಾರಿಸುಲು ಹಾಡುವ ವಾಡಿಕೆಯೂ ಇದೆ.

ಒಕ್ಕಲಿಗರು ಹಾಡುವ ಕಾಲವೆಂದರೆ ಮುಖ್ಯವಾಗಿ ಸುಗ್ಗಿಯ ಕಾಲ. ಈ ಶಿವಶರಣರ ಹಾಡುಗಳು ಡೊಳ್ಳು, ದಪ್ಪು ಮೊದಲಾದ ಜೋಡಣಿ ಗಳೊಡನೆ ಹಾಡಲು ಬರುವವು. ಈ ಪುಸ್ತಕದಲ್ಲಿ ಮಾದರಿಗಾಗಿ, 'ಗೊಲ್ಲಾಳ'ನ ಹಾಡನ್ನು ಡೊಳ್ಳಿನೊಡನೆ ಹಾಡಲು ಬರಬೇಕೆಂದು ಮೊದಲು ಉಗ್ಗಡಣಿ ಯನ್ನು ಕೊಟ್ಟಿರುವದು. ಕುರುಬ ಮೊದಲಾದ ಡೊಳ್ಳು, ಡೋಲು ಬಾರಿಸುವ ಜನರು ತಮ್ಮ ಧಾಟಿಯಲ್ಲಿ ಈ ಎಲ್ಲ ಹಾಡುಗಳನ್ನು ಕೂಡಿಸಿ ಡೊಳ್ಳು ಬಾರಿಸುತ್ತ ಸಹಜವಾಗಿ ಹಾಡಬಹುದು.

**ಕವಿಯ ಸಂಬಂಧ ಈ ಹಾಡುಗಳಲ್ಲಿ ದೊರೆವ ಸಂಗತಿಗಳು :—**

ಈ ಜನಪದ ಕವಿಯು ತನ್ನ ಹಾಡುಗಳಲ್ಲಿ ಎಲ್ಲಿಯೂ ತನ್ನ ವ್ಯಕ್ತಿತ್ವದ ಸಂಬಂಧ ಹೆಚ್ಚಿಗೆ ಹೇಳಲು ಹೋಗಿಲ್ಲ. ಹಂತಿಯ ಹಾಡುಗಳೆಂದು ಪ್ರತಿ ಯೊಂದು ಹಾಡಿನ ಕೊನೆಯ ಎರಡು ಪದ್ಯಗಳಲ್ಲಿ ಹೇಳಿ ಶಿವಶರಣರಿಗೆ, ಹುಲುಸು ಕೊಡಿರೆಂದು ಉಡಿಯೊಡ್ಡಿ ಬೇಡಿದ್ದಾನೆ. ಅವನ ಹಾಡುಗಳನ್ನು ಓದುವ ಮತ್ತು ಕೇಳುವ ನಮಗೆ, ಅವನು ನಿರಕ್ಷರನಿದ್ದರೂ ಸಹಜ ಕವಿಯಿದ್ದು, ಅವನಿಗೆ ನಿಸರ್ಗದ ಬಲವಾದ ಆಶೀರ್ವಾದವಿತ್ತೆಂದು ಅನಿಸ ದಿರದು. ಇದನ್ನೆಲ್ಲ ವಿಸ್ತರಿಸಿಕೊಳ್ಳಲು ನಾನು ವಿಮರ್ಶಕರಿಗೆ ಬಿಟ್ಟು ಕೊಟ್ಟಿದ್ದೇನೆ. ಸಮಾಧಿಕ್ರಿಯಾಕಾಯಕವನ್ನು ಕೈಕೊಂಡ 'ಹೂಗಾರ ಮಾದಯ್ಯ'ನ ಹಾಡಿನ (ಇನ್ನೂ ಅಚ್ಚಾಗಿಲ್ಲ) ಕೊನೆಯ ಕೆಲವು ಪದ್ಯಗಳಲ್ಲಿ ತನ್ನ ಸಂಬಂಧ ಕೆಲವು ಸಂಗತಿಗಳನ್ನು ಮಾತ್ರ ಈ ಕವಿಯು ಹೇಳಹೋಗಿದ್ದಾನೆ.

ಸುಗ್ಗಿ ದಾಸೋಹೆಂದು, ಹಿಗ್ಗಿ ಬೆಳವಲು ನೋಡು
ಹುಗ್ಗಿ ಹೋಳಿಗೆಯು ನಿನ್ನಾಡು । ಸುಗ್ಯಾಟ
ನಗ್ಗೇಡು ಇದಕೆ ಮಲೆನಾಡು ॥ ೮೮ ॥

ಹಾರಿಬರುವದು ಹುಲುಸು, ಏರಿಮಾದನ ಪತ್ರಿ
ಸೂರಿ ಹಾಡುವೆನು ನಿನ್ನಾಡ । ಬೆಳತನಕ
ಯಾರು ಕೈತಟ್ಟ ನಿಲ್ಲುವರು ॥ ೮೯ ॥

ಒಡೆದು ಹಾಡುವೆನೆಂದು, ಎಡವಿ ಬೀಳುವರೆಷ್ಟೊ
ಜಡಮತಿಗಳೆಲ್ಲ ತಡಪಡಿಸಿ । ನಿನ್ನಾಡ
ಮಿಡಿಯುವದಕೆ ಬಾಯಿ ಕಳಕೊಂಡು ॥ ೯೦ ॥

ರಾಚಯ್ಯ ನಿನಮಗನು, ಊಚಸಾವಳಿಗೇಶ
ಕೋಚಿತ್ರಿ ಕಣಕೆಹಾಡಿದನು । ಬೆಳತನಕ
ನಾಚಿ ಕತ್ತಲೆಯು ಬೆಳಗಾಯ್ತು ॥ ೯೧ ॥

ನನ್ನ ಕಾಯಕಕೇಳೊ, ನನ್ನಿಯಲಿ ಹಾಡುವದು
ಕುನ್ನಿ ನಾ ಜನಕೆ ಅಕ್ಕರವ । ಕಲಿತಿಲ್ಲ
ಸುನ್ನಿ ಬರೆಯುವದಕೆ ಕೈಯೆಲ್ಲಿ ॥ ೯೨ ॥

ಸೊನ್ನಿಯಲಿ ಹಾಡುದಕೆ, ನನ್ನವ್ವ ಕಲಿಸಿದಳು
ಬಿನ್ನಾಣ ವೆನಗೆ ಹಾಡುದಕೆ । ಹಡದವ್ವ
ಸನ್ನುತದ ಶರಣೆ ಶಿವಪದಕೆ ॥ ೯೩ ॥

ಎಂದು ಹೇಳಿದ್ದಾನೆ.

ಹಂತಿಯ ಹಾಡುಗಳಾದ ಇವುಗಳನ್ನು ಪುಸ್ತಕ ರೂಪವಾಗಿ ತಮ್ಮೆಲ್ಲರ ಮುಂದೆ ಇಟ್ಟಿದ್ದೇನೆ. ಈ ಹಾಡುಗಳಲ್ಲಿ ಭಾಷಾಪ್ರಯೋಗದೃಷ್ಟಿಯಿಂದ ಅಲ್ಲಲ್ಲಿ ಸಂದೇಹಗಳು ಓದುಗರಿಗೆ ಉಂಟಾಗಬಹುದು. ಆದರೆ ಇಲ್ಲಿ ಭಾಷಾಪ್ರಯೋಗಕ್ಕಿಂತ ಭಾವವಿಲಾಸವೇ ಮುಖ್ಯ. ಆ ಭಾವವಿಲಾಸದೊಡನೆ ಬೆರೆದು ರಸಪರಿಪಾಕವನ್ನುಂಟು ಮಾಡಿಕೊಳ್ಳುವದು ರಸಿಕರನ್ನೇ ಕೂಡಿದೆ. ಓದುಬರಹವನ್ನು ಕಲಿತ ಕನ್ನಡನಾಡಿನ ಎಲ್ಲ ಹೆಣ್ಣು ಮಕ್ಕಳೂ ಒಕ್ಕಲಿಗರೂ ಈ ಸಂಕಲನವನ್ನೋದಲೆಂದು ದೊಡ್ಡ ಅಕ್ಷರಗಳ ಅಚ್ಚನ್ನು

ಮುದ್ರಣಕ್ಕೆ ಉಪಯೋಗಿಸಲಾಗಿದೆ. ಅದರ ಪ್ರಯೋಜನವನ್ನು ಎಲ್ಲರೂ ಪಡೆಯುವಿರೆಂದು ನಾನು ತುಂಬಾನಂಬಿದ್ದೇನೆ. ಹಲಕೆಲವು ಮುದ್ರಣ ದೋಷಗಳು ಕಂಡುಬಂದುದರಿಂದ ಒಪ್ಪೋಲೆಯನ್ನು ಕೊಡಲಾಗಿದೆ. ವಾಚಕರು ಸರಿಪಡಿಸಿಕೊಂಡು ಓದುವಿರೆಂಬ ಆಶಿಸುವೆ.

ನಮ್ಮ ಇಂದಿನ ಬಾಳಿನಲ್ಲಿ ಮರೆಯಾಗುತ್ತಿರುವ ಜಾನಪದ ಗೀತಗಳ ಸಂಪತ್ತನ್ನು ಉಳಿಸಿಕೊಳ್ಳುವ ಕೆಲಸಕ್ಕೆ ನಾನೇನೋ ಕೈಹಾಕಿದ್ದೇನೆ. ಈ ಕಾರ್ಯ ಸಫಲವಾಗುವದು ಧನಿಕರೂ ಸಹೃದಯರೂ ಈ ಸಂಬಂಧದಲ್ಲಿ ಸಹಾಯ ನೀಡಲು ಮುಂದೆ ಬಂದಾಗ ಮಾತ್ರ.

ನನ್ನ ಈ ಚಿಕ್ಕ ಸಂಕಲನಕ್ಕೆ ಮುನ್ನುಡಿಯೊಂದನ್ನು ಬರೆದು ಕೊಡಿರೆಂದು ಗುರುವರ್ಯರಾದ ಪ್ರೊ. ವ್ಹಿ. ಜಿ. ಕುಲಕರ್ಣಿ ಅವರಿಗೆ ಪ್ರಾರ್ಥಿಸಿ ಕೊಳ್ಳಲು ಓಗೊಟ್ಟು, ತಮ್ಮ ಜನಪದ ಸಾಹಿತ್ಯದ ಆಳವಾದ ಅನುಭವದ ಮುನ್ನುಡಿಯನ್ನು ಸಮಯೋಚಿತವಾಗಿ ಬರೆದು ಕೊಟ್ಟದ್ದಕ್ಕೆ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸದಿರಲಾರೆ. ನನ್ನ ಪರಮ ಮಿತ್ರರೂ, ಕವಿವರ್ಯರೂ ಆದ ಡಾ॥ ಕರ್ಕಿ ಅವರು ಈ ಪುಸ್ತಕ ಬೆಳಕು ಕಾಣಲು ಅನೇಕ ಸಲಹೆಗಳನ್ನು ನೀಡಿದ್ದಕ್ಕೆ ಅವರಿಗೂ ನನ್ನ ಅಭಿವಂದನೆಗಳು. ಅಚ್ಚುಕಟ್ಟಾಗಿ ವೇಳೆಗೆ ಮುದ್ರಿಸಿ ಕೊಟ್ಟದ್ದಕ್ಕಾಗಿ, 'ವಿಶ್ವಭಾರತ ಪ್ರಿಂಟಿಂಗ ಪ್ರೆಸ್ಸ'ದ ವ್ಯವಸ್ಥಾಪಕರಾದ ಪರಮಮಿತ್ರ ಎಮ್. ಬಿ. ವಂಟಮುತ್ತೆ ಯವರನ್ನು ಈ ಪ್ರಸಂಗದಲ್ಲಿ ಮನ್ನಿಸದಿರಲಾರೆ.

—: ಕನ್ನಡಂಗೆಲ್ಗೆ :—

ಸಂಕಲನಕಾರರು—

ಚೈತ್ರಶುದ್ಧ ೧ ನಂದನನಾಮ ಸಂವತ್ಸರ
ಶಾ. ಶಕೆ. ೧೮೭೪.



# ಮುಡಿಪು.



ಕಣ್ಮರೆಯಾದ ' ಕುರಿತೋದದ '

**ಜನಪದ ಕವಿ.**

**ತೀ|| ಕೈ|| ಸಾವಳಿಗೆಯ್ಯ ರಾಚಯ್ಯ ಗದ್ದಗಿಮಠ.**

**ಕೇರೂರ.**

ನಿಮ್ಮ ಹಂತಿಯಹಾಡು, ಗುಮ್ಮ ಎದೆಯೊಳಗುಳಿದು
ನೆಮ್ಮದಿಯ ಹಾದಿ ಉಸುರಾಗಿ । ನನ್ನಪ್ಪ
ಸುಮ್ಮನಿರಲಿಲ್ಲ ಎದೆಯೊಳಗೆ ॥ ೧ ॥

ಹಾಡಿದಿರಿ ನಿಮ್ಹಾಡ, ಕಾಡು ಕೇಳಿದವಂದು
ನಾಡಿಂದು ಕೇಳಿ ಚೆಲುವಾಗಿ । ಇರಲೆಂದು
ಚಾಡಿ ಹೇಳುವೆನು ಜಗದೊಳಗೆ ॥ ೨ ॥

ತಂದೆ ನಿಮ್ಮಡಿಗಳಿಗೆ, ತಂದಿರುವೆ ನಿಮ್ಹಾಡ
ಕಂದಯ್ಯನೆಂದು ಬಿಗಿದಪ್ಪಿ । ಹಾಡುದಕೆ
ಮುಂದೆನಗೆ ಹರಸು ಮಮತೆಯಲಿ ॥ ೩ ॥

**B. S. G.**

# ಒಪ್ಪೋಲೆ

| ತಪ್ಪು | ಒಪ್ಪು | ಪುಟ | ಪದ್ಯ |
|---|---|---|---|
| ಮುತ್ಥಚ್ಚಿ | ಮುತ್ತ್ಯುಚ್ಚಿ | ೫ | ೨೧ |
| ಅಗ್ಗಣಗಿ | ಅಗ್ಗವಣಿ | ೫ | ೨೨ |
| ಹಾಲುಣ್ಣಲು | ಹಾಲುಣಲು | ೧೦ | ೪೭ |
| ಚೆಂತಿಸಿ | ಚಿಂತಿಸಿ | ೧೫ | ೭೨ |
| ತುಟೆಯು | ತುಟಿಯು | ೧೬ | ೭೫ |
| ಕಂತು | ಕುಂತು | ೧೯ | ೪೯ |
| ನಾಡೂಳಗೆ | ನಾಡೊಳಗೆ | ೨೧ | ೬ |
| ಪವಣಕೆ | ಪಡುವಣಕ | ೩೦ | ೫೦ |
| ನನ್ನಯ್ಯಾ | ನನ್ನಯ್ಯ | ೩೫ | ೭೬ |
| ದಿನಬಿಂತು | ದಿನಬಂತು | ೩೯ | ೨ |
| ಕೂಡಗೂಸು | ಕೊಡಗೂಸು | ೪೦ | ೧೭ |
| ಕೊಡೆಗೂಸು | ಕೊಡಗೂಸು | ೪೦ | ೧೩ |
| ಮನೆದೊಳಗೆ | ಮನದೊಳಗೆ | ೪೦ | ೧೪ |
| ಕೈಮೊಗಿದು | ಕೈಮುಗಿದು | ೪೭ | ೪೯ |
| ಎದೆಯೊಳು | ಎದೆಯೊಳಗೆ | ೫೨ | ೭೦ |



# ಪರಿವಿಡಿ.







# * ಬಿಜ್ಜಮಹಾದೇವಿ *



ಸೂಚಕ ಪದ್ಯ:-ಬಿಜ್ಜಮಹಾದೇವಿಯು, ಉಜ್ವಳಶಿವಶರಣೆಯು
ಸಜ್ಜೆಯೊಳು ಶಿವನು ಕೂಸಾಗಿ । ಮಲಗಿರಲು
ಸಜ್ಜಾಗುಣತಿನಿಸಿ ಸಲುಹಿದಳು ॥ ೧ ॥

ಶಿವಶರಣೆ ನಿನ್ನಾಡ, ಭವದೊಳಗೆ ಹಾಡುವದು
ಶಿವಪದಕೆ ಮಿಗಿಲು ನಿತ್ಯದಲಿ । ಕೊನೆಯುಂಟೆ
ಶಿವಭಕ್ತಿಸಾರ ತಿಳಿಸುದಕೆ ॥ ೨ ॥

ನಿನ್ನ ಹಾಡಿನ ಬಳ್ಳಿ, ನನ್ನಿ ಹಂದರ ಹಬ್ಬಿ
ಕನ್ನೆಭಕ್ತಿಯಾ ಮಿಡಿಯಾಗಿ । ಮೀಸಲವು
ಮುನ್ನ ತಂದೆಯಾ ಎಡೆಗಾಗಿ ॥ ೩ ॥

ಕುಂತಳೆಯ ಶಿವಪುರವು, ಎಂತು ಹೇಳಲು ಬೇಕು
ಕಂಥೆಕಾಯಕದ ನಾಡಂದು । ಬಿಜ್ಜರದು
ಎಂಥ ಮನೆತನವೊ ಶಿವಮತಕೆ ॥ ೪ ॥

ಅಮ್ಮಮಹಾದೇವಿಯು, ನಮ್ಮ ಧರುಮದ ಶರಣಿ
ಹೆಮ್ಮೆ ನಮಗಿಂದು ಹಾಡುದಕೆ । ಹುಟ್ಟಿದಳು
ಸೊಮ್ಮ-ಬಿಜ್ಜರಾ ಮನೆಯೊಳಗೆ

ತಂದೆಯಾ ಸಂಪತ್ತು, ಎಂದು ಕರಗುವದುಂಟೆ
ಬಂದು ಲಕ್ಕಸಮಿ ಮನೆಯಾಳು । ಜಂಗಮಕೆ
ಹೊಂದಿ ನಡೆದಿತ್ತು ದಾಸೋಹ ॥ ೬ ॥

ಮೊಸಲಕೆ ವರಗನ್ನೆ, ವಾಸನೆಯು ಕಮರಿತ್ತು
ನಾಶವಾಗದಾ ಶಿವಭಕ್ತಿ । ಆಶರಣಿ
ಈಶನೋಂಪೆಯೊಳು ಹಗಲಿರುಳು ॥ ೭ ॥

ಓಣಿಯಲಿ ಕೂಸುಗಳ, ಕಾಣುತಲಿ ಎತ್ತಿಳಿಸಿ
ಮಾಣಿಸುವಳವರ ನೋವುಗಳ । ನಿತ್ಯದಲಿ
ಜಾಣಿಮಾದೇವಿ ಶಿವಶರಣಿ ॥ ೮ ॥

ಶಿವಮಾಸ ಶ್ರಾವಣವು, ಶಿವಭಜನೆ ನಡೆಯುವದು
ಶಿವಕೊಟೆ ಸುತ್ತ ಕೊಡುವದು । ನಾಡೊಳಗೆ
ಶಿವಲೀಲೆ ಜಗಕೆ ಸಾರುದಕೆ

ಶಿವಪುರದ ಮಠದೊಳಗೆ, ಶಿವಲೀಲೆ ಹಾಡಿದರು
ಶಿವಗುಂಟಿ ತಾಯಿ ಪರದೇಶಿ । ತಿರಿದುಂಡ
ಶಿವವಾಸ ನಿತ್ಯ ಸುಡಗಾಡ ॥ ೧೦ ॥

ಹೆಂಡರಿಬ್ಬರು ಕೇಳಿ, ಮಂಡೇರು ಕದನಿಗಳು
ಭಂಡಾಗಿ ಶಿವನು ಮನೆಬಿಟ್ಟು । ಸೇರಿದನು
ರುಂಡಧಾರ್‍ಯಾಗಿ ಸುಡಗಾಡ ॥ ೧೧ ॥

ಮಕ್ಕಳವನಿಗೆ ಮೂರು, ಮಿಕ್ಕ ಊಳಿಗ ಉಂಟು
ಕಕ್ಕಸವ ಬಿಡುವ ಸುಖವಿಲ್ಲ । ತಾಯಿಯನೆ
ಮಿಕ್ಕವರು ಉಂಟೆ ಜಗದೊಳಗೆ ॥ ೧೨ ॥

ಹಾಡ ಕೇಳಿದ ಶರಣಿ, ಮಾಡಿದಳು ಬಲು ಚಿಂತಿ
ಕೇಡ ಬಗಿಸುವದೆ ಶಿವ ನಿನಗೆ । ನಾನಿದ್ದು
ನೋಡಿ ಸಲಹುವೆನು ತಾಯಾಗಿ ॥ ೧೩ ॥

ಕೆಂಜೆಡೆಯ ಬಿಟ್ಟಿರುವಿ, ಮಂಡೆಹದಗೆಟ್ಟಿಹುದು
ರುಂಡಮಾಲೆಯನೆ ಹಾಕಿರುವಿ । ಕೊರಳೊಳಗೆ
ಕೆಂಡಗಣ್ಣೊಂದು ಹಣೆಯೊಳಗೆ ॥ ೧೪ ॥

ಜೋಗಿ ಬಟ್ಟಲ ಹಿಡಿದು, ಜೋಗಿ ಜಗದೊಳು ತಿರಿದು
ಜೋಗಾಗಿ ಬೂದಿ ಮೈತುಂಬ । ಬಡಕೊಂಡು
ಹೀಗಿದ್ದರೆ ನಾನು ಸಹಿಸುವೆನೆ ॥ ೧೫

ಹಾವಿನಾಭರಣಗಳು, ಯಾವತಾಣದಲುಂಟು
ಸಾವ ಬಗೆಸುವರೆ ಹೆಡೆಹಿಡಿದು । ತರವಲ್ಲ
ಹಾವಗೂಡೇಕೆ ಹುಡುಗಾಟ ॥ ೧೬ ॥

ಸುಡಗಾಡ ವಾಸವದು, ಕಡೆಗಾಲ ಜೀವನಿಗೆ
ಎಡೆಯಾಗುದೈತಿ ಕಡೆಗೊಮ್ಮೆ । ನಾನಿದ್ದು
ಸುಡಗಾಡವಾಸ ನಿನಗೇಕೆ ॥ ೧೭ ॥

ತಾಯಿ ಇಲ್ಲದ ನಿನ್ನ, ಕಾಯಬಾಡಿದೆ ಶಿವನೆ
ನ್ಯಾಯವೇ ಸಾರಿ ಹೇಳುವದು । ಶಿವಲಿಂಗ
ತಾಯಿ ಕಳಕೊಂಡ ಪರದೇಶಿ ॥ ೧೮ ॥

ತಾಯಿ-ಬಳ್ಳಿಗೆ ಹೇಳು, ಕಾಯಿ ಹೂಗಳ ಭಾರ
ಛಾಯೆ ನಿನಭಾರ ನನಗುಂಟೆ । ಮಗುವಾಗು
ತಾಯಾಗಿ ನಗುವೆ ಶಿವಲಿಂಗ ॥ ೧೯ ॥

ತೊಗಲ ಹೊದ್ದಿದಿ ದೇವ, ನಗುತಲಿದೆ ಜಗವೆಲ್ಲ
ತಗೆದಿಡೀರೂಪ ಒಪ್ಪುವದೆ । ಶಿವಲಿಂಗ
ಮಗುವಾದರೆನಗೆ ತೊಡಿಸುವೆನು ॥ ೨೦ ॥

ಗುಂಡಿಯದೆ ಮುಂಡಾಸ, ಗೊಂಡೆಗಳ ಗರಿಯೆಂಟು
ತೊಂಡಲ್ಮುತ್ತಿನ ತುರಾಯಿಯೊ । ಚೆಲುವಂಗಿ
ಗುಂಡಂಚ ಸಂಜೆ ಮುಕ್ಸಚ್ಚಿ ॥ ೨೧ ॥

ರಂಜಣಗಿ ಅಗ್ಗಣಗಿ, ಮಂಜು ಹರಿಯಲು ಕಾಸಿ
ನಂಜುಂಡ ನಿನ್ನ ಎರೆಯುವೆನು । ಮಗನಾಗು
ಕೆಂಜಡೆಯ ಹಿಕ್ಕಿ ಹಡೆಸೊಗೆದು ॥ ೨೨ ॥

ಮುಚ್ಚು ಮರೆ ಮಾಡುಣಿಸಿ, ಎಚ್ಚರದಿಸಲಹುವೆನು
ಹೆಚ್ಚೇಕೆ ಶಿವನೆ ಮಗುವಾಗು । ಎಣೆಯಾರು
ಇಚ್ಛೆಯಲಿ ನೀನು ಮಗನಾಗೆ ॥ ೨೩ ॥

ಪರಿಪರಿಲಿ ಹಲಬುತಲಿ, ಹರಭಜನೆ ಮಾಡುತಲಿ
ಹರಮೆಚ್ಚಿ ಚೀರಿ ಕೂಸಾದ । ಶಿವಶರಣೆ
ಅರಿತು ಕಿವಿಗೊಟ್ಟು ಹರುಷಾಗಿ ॥ ೨೪ ॥

ದೇವದುಂದುಭಿ ಮೊಳಗಿ, ತೀವಿದವು ಗಗನದೊಳು
ಹೂವ ಮಳೆಗರೆದು ಶಿವಗಣವು । ಹಾಡುತಿರೆ
ಜೀವಲೋಕೆಲ್ಲ ಕಳೆದುಂಬಿ ॥ ೨೫ ॥

ಏಳು ಸೂರರ ಬೆಳಕ, ಹೇಳಿ ಹೀಯಾಳಿಸಿತು
ಭಾಳಲೋಚನನ ಶಿಸುರೂಪ । ಶಿವಶರಣಿ
ತಾಳಿ ತಾಯ್ತನವ ಹಾಲುಣಿಸಿ ॥ ೨೬ ॥

ಎಣ್ಣೆ-ಕತ್ತುರಿ ಹೂಸಿ, ಕಣ್ಣು-ಮೂಗನು ತಿದ್ದಿ
ಚೆನ್ನಿಗನ ಚೆಲುವ ಶಂಕರನ । ಎರೆದೆತ್ತಿ
ನನ್ನಿಯಲಿ ಅಪ್ಪಿ ಹಾಲುಣಿಸಿ ॥ ೨೭ ॥

ಕರೆಸಿದರು ಜಂಗಮರ, ನೆರೆಸಿದರು ಪರಸಿಯನೆ
ಹೊರಿಹೊರಿಸಿ ದಾನ ನೀಡಿದರು । ದಾಸೋಹ
ಭರದಿ ನಡೆಸಿದರು ನಿತ್ಯದಲಿ ॥ ೨೮ ॥

ಕೇರಿಯೊಳು ಕೆಳದಿಯರು, ಓರಗೆಯ ಗೆಳತಿಯರು
ಸಾರಿ ಬರುಬರುತ ಕೇಳುತಲಿ । ಮನೆದುಂಬಿ
ತೋರಿ ಮುಂಬರುವ ಶುಭಚಿನ್ಹ

ಕಪ್ಪುಗಾಡಿಗೆಮಾಡಿ, ಅಪ್ಪಿ ಮಗುವಿಗೆಹಚ್ಚಿ
ಜಪ್ಪಿಸುತ ಕಾಯ್ದು ಹಗಲಿರುಳು । ದೀವಿಗೆಯ
ತಪ್ಪದಲೆ ಶಿವನ ಮುದ್ದಿಟ್ಟು ||೩೦ ||

ಹುಟ್ಟಿರುವ ಶುಭದಿನದಿ, ಇಟ್ಟು ಕರೆಯಲು ಹೆಸರ
ತೊಟ್ಟಿಲಕೆ ಹಾಕಿ ಜೋಯೆಂದು । ಕರೆಸಿದರು
ನೆಟ್ಟ ಶಿವಮಠದ ಜಂಗಮನ || ೩೧ ||

ಶಿವಮಂತ್ರ ಊದಿದನು, ಶಿವಮಠದ ಜಂಗಮನು
ಶಿವಲಿಂಗನೆಂದು ಹೆಸರಿಟ್ಟು । ಕೂಗಿದನು
ಶಿವರೂಪ ಕೂಸು ನಗತಿತ್ತು || ೩೨ ||

ಶಿವಶರಣಿ ಮಾದೇವಿ, ತವಕದಲಿ ಉಡಿಯೊಡ್ಡಿ
ಭವಹರನ ಎತ್ತಿ ಮುಂಡಾಡಿ । ನಮಿಸಿದಳು
ಭವನಾಶಪಾದ ಜಂಗಮಗೆ || ೩೩ ||

ಮನೆಮನೆಗೆ ದಾದಿಯರು, ಒಣಪು ಒಯ್ಯಾರಾಗಿ
ತನಯುನಿಗೆ ಶಿವಗೆ ಹೆಸರಿಡಲು । ಬರ್‍ರೆಂದು
ಕೆಣಕೆಣಕಿ ಕರೆಯೆ ನಾರಿಯರು || ೩೪ ||

ಸಿಂಗಾರವುಟಿಗೊಂಡು, ಸಿಂಗಾರವಿಟಗೊಂಡು
ಹೆಂಗಳೆಯರಾಗ ನಲಿನಲಿದು । ಅರಮನೆಯ
ಸಿಂಗಾರಸಾಲೆ ತುಂಬಿದರು ॥ ೩೫ ॥

ನೆರೆಮನೆಯ ರಮಣಿಯರು, ಹಿರೆಮನೆಯ ಚೆನ್ನಿಯರು
ಹರೆದೆಯರು ಊರ ಮುತ್ತೈದಿ । ಮುದಕಿಯರು
ನೆರೆದರರಮನೆಗೆ ಕನ್ನೆಯರು ॥ ೩೬ ॥

ಹೊನ್ನತೊಟ್ಟಿಲಕಟ್ಟಿ, ರನ್ನಮುತ್ತಿನಹಗ್ಗ
ಚೆನ್ನೆಹರದೆಯರು ಗುಂಪಾಗಿ । ಹಾಕಿದರು
ರನ್ನಗಂಬಳಿಗೆ ಶಾಸಕ್ಕಿ ॥ ೩೭ ॥

ಹಡದವ್ವ ಮಾದೇವಿ, ತಡಬಡನೆ ಶಾಸಿಯೊಳು
ಬೆಡಗಿನಲಿಬಂದು ಮಂಡಿಸಲು । ಐದೇರು
ತೆಡೆದು ಶಾಸಕ್ಕಿ ಎತ್ತಿದರು ॥ ೩೮ ॥

ಚಿನ್ನದಾರತಿ ತುಂಬಿ, ರನ್ನಗಳಸವನಿಟ್ಟು
ಚೆನ್ನೆಹರದೆಯರು ಮಂಗಲವ । ಎತ್ತಿದರು
ಹೊನ್ನ ತೊಟ್ಟಿಲಕೆ ಕೂಸ್ಹಾಕಿ ॥ ೩೯ ॥

ಬೆರಳಿಗುಂಗರವಿಡಿಸಿ, ಕೊರಳ-ಪದಕವ-ಹಾಕಿ
ಸಿರಪೇಚು ತಲೆಗೆ ವಜ್ಜರದು । ಉಡದಾರ
ವರ ಮುತ್ತಿನೆಳೆಯು ಕಟ್ಟಿದರು ॥ ೪೦ ॥

ಮುತ್ತಿನಾ ಕುಂಚಿಗಿಗೆ, ಒತ್ತಿ ಕುಸುರನು ತಗೆದು
ಸುತ್ತ ಮಣಿಕೆಚ್ಚಿ ಹೆಣೆದಿರುವ । ಹೊದಿಕೆಯೊಳು
ಬತ್ತಲೆಯ ಚಂದ್ರ ಕೂಸೇನೊ ॥ ೪೧ ॥

ತೊಟ್ಟಿಲಿದ ಸರಪಳಿಯು, ಬೊಟ್ಟು ಕುಂಕುಮದವರು
ಒಟ್ಟಾಗಿ ನಿಂತು ಜೋಯೆಂದು । ಗಲ್ಲಿಸಲು
ಬೊಟ್ಟೆತ್ತಿ ಶಿವನು ಆಡಿದನು ೪೨ ॥

ಕಂಕಣಬಳಿಗಳಿಟ್ಟು, ಬಿಂಕದಲಿ ಝಣಕಿಸುತ
ಕಿಂಕರಿಯು ನುಡಿಸಿ ಹಾಡಿದರು । ಧನಿಯೆತ್ತಿ
ವಂಕ ನೋಟಾದ ಚೆಲುವೆಯರು ॥ ೪೩ ॥

ಜೋ ಜೋ ಶಿವನೆ
ಕೈಲಾಸ
ಶಿವನೆ ಶಿವಲಿಂಗ ಜೋ ಜೋ ॥ ಪ ॥

ತ್ರಿಪುರಗಳ ಸುಟ್ಟೆಂದು, ಶಿವನೀನು ದಣಿದಿರುವಿ
ತವನೀಗೋ ಹರನೆ ದಣುವಿಂದು । ಆಡ್ಯಾಡಿ
ಭವದೊಳಗೆ ನೀನು ಕೂಸಾಗಿ || ಜೋ ಜೋ || || ೪೪ ||

ಸಿಟ್ಟು ಬಂದರೆ ಶಿವನೆ, ತಟ್ಟಲಾರರು ಯಾರು
ತಟ್ಟಿ ಸುಟಗೊಂಡ ದಕ್ಷಂದು । ಸಿಟ್ಟಳಿದು
ಹುಟ್ಟಿ ಮರೆತಾಡು ಕೂಸಾಗಿ || ಜೋ ಜೋ || ೪೫ ||

ಬೋಳೆ ಶಂಕರನಯ್ಯ, ಕೇಳದಲೆ ವರಕೊಟ್ಟು
ಕೀಳಾಗಿ ಲೋಕ ಕೆಳಗಿಳಿತು । ಸಾಕಾಗಿ
ಹೇಳುದಕೆ ಶಿವನೆ ಕೂಸಾದಿ || ಜೋ ಜೋ || || ೪೬ ||

ಕಾಳಕೂಟದ ವಿಷವ, ಗೋಳಿಡಲು ದೇವಗಣ
ಹೇಳದಲೆ ನುಂಗಿ ಮೈಯುರಿಯ ನಾರಿಸಲು
ಹಾಲುಣ್ಣಲು ಶಿವನೆ ಶಿಸುವಾದಿ || ಜೋ ಜೋ || || ೪೭

ರುಂಡ-ಮಾಲೆಯ ಹಾಕಿ, ಕೆಂಡ-ಗಣ್ಣನು ತೆರೆದು
ಭಂಡಾಗಿ ಸೇರಿ ಸುಡಗಾಡ । ತಿರಿದುಂಡು
ಚೆಂಡಿತನ ಬಿಡಲು ಕೂಸಾದಿ || ಜೋ ಜೋ || || ೪೮

ಬಿಲ್ಲಿಲೊಗೆಯಲು ಮೆಚ್ಚಿ, ಕಲ್ಲಿಲೊಗೆಯಲು ಒಲದಿ
ಚೆಲ್ಲಿ ನೀರುಗಳೆ ಕನ್ನನಿಗೆ । ತೋರಿಂದು
ಚೆಲ್ಲಾಟಾಡಲು ಕೂಸಾದಿ ॥ ಜೋ ಜೋ ॥ ॥ ೪೯ ॥

ಬೋಳೆ ಶಂಕರನಾದಿ, ಕಾಳಭೈರವನಿಯಾದಿ
ಹೇಳುದುಕೆ ಭೀತಿ ಲೀಲೆಗಳ । ಮಾಡಿಂದು
ಬಾಲ ಲೀಲೆಗೆಲೆ ಕೂಸಾದಿ ॥ ಜೋ ಜೋ ॥ ॥ ೫೦ ॥

ಚೆಲುವ ಚೆನ್ನಿಗ ಜೋರೆ, ನಿಲುವ ಗನ್ನಡಿ ಜೋರೆ
ಎಳೆವರೆಯೆ ಬೆಳಗು ಜೋ ಜೋರೆ । ಹಾಡ್ಹಾಡಿ
ಚೆಲುವೆಯರು ಕೂಸ ಮುದ್ದಿಟ್ಟು ॥ ಜೋ ಜೋ ॥ ॥ ೫೧ ॥

ಸಾಸಿರದ ಹೆಸರೊಳಗೆ, ಮಾಸದಿರು ಹೆಸರೊಂದು
ಕೂಸ ಶಿವಲಿಂಗ ಹೆಸರಿಟ್ಟು । ಐದೆಯರು
ಬೀಸಿ ತೊಟ್ಟಿಲವ ತೂಗಿದರು ॥ ಜೋ ಜೋ ॥ ॥ ೫೨ ॥

ಹೆಸರಿಟ್ಟೆ ಹರದೆಯರು, ಹೊಸ ಮುತ್ತಿನುಡಿಕಟ್ಟಿ
ನಸುನಕ್ಕು ನಕಲಿಯೊಡಪಾಡಿ । ನಿಂತಿರಲು
ಗಸನೆ ಪಡುವಣಕೆ ದಿನಮುಣಗಿ ॥ ೫೩ ॥

ಹಸಿವು ನೀರನು ಮರೆತು, ಹೊಸ ಮಾತನಾಡುತಲಿ
ಹಸನೆಯರು ನಡೆದು ಬೇಗಿನಲಿ । ಮನೆಗೆಲಸ
ಹೊಸಬತ್ತಿ ದೀಪ ತುಂಬುದಕೆ ॥ ೫೪ ॥

ಬಂದ ಕೆಂಚೆಯರೆಲ್ಲ, ಹಿಂದಿರುಗಿ ಮನೆಸೇರಿ
ಕಂದ ಶಿವಲಿಂಗ ತಾನಾಡಿ । ತೊಟ್ಟಿಲವು
ಚಂದಾಗಿ ತೂಗಿ ಬಲುಹಾಡಿ ॥ ೫೫ ॥

ಬರಿಯ ತೊಟ್ಟಿಲದೊಳಗೆ, ಹರನೊಬ್ಬ ಮಲಗಿರಲು
ಜರಿಜರಿದು ಜೀಕ ತೊಟ್ಟಿಲಕೆ । ಮಾದೇವಿ
ಹರನಾಟ ನೋಡಿ ಮೈಮರೆತು ॥ ೫೬ ॥

ಹೊತ್ತು ಮುಣಗಿತು ಶಿವನೆ, ಸುತ್ತ ಕತ್ತಲವಿಲ್ಲ
ಎತ್ತ ನೋಡಿದರು ಶಿವಬೆಳಕು । ತೇಲುತಲಿ
ಚಿತ್ತವೊಂದಾಗಿ ಜಗವೊಂದು ॥ ೫೭ ॥

ತಾಯಿ ಕೂಸಿನ ಶರಣೆ, ಮಾಯೆಯಲಿ ಉಣತಿನಿಸಿ
ಕಾಯ ಬಲಗೊಂಡು ಸುಖದಿದ್ದು । ಬಾಳೆಂದು
ಆಯು ಹೆಚ್ಚಾಗಿ ಕಡೆತನಕ ॥ ೫೮ ॥

ಕಣ್ಣು ದಿಟ್ಟಿಯು ನಟ್ಟು, ಸಣ್ಣಾಗಿ ಸೊರಗುವನು
ಮಣ್ಣು ಮೂದಾರಿ ಎಣ್ಣೆಯಲಿ । ಬಿಡದೆರಚಿ
ಕಣ್ಣು ಬಿಡಕೊಂಡು ಇಳಿದೊಗೆದು ॥ ೫೯ ॥

ಮುಟಗಿ ಮೆಣಸಿನಕಾಯಿ, ಚಿಟಿಗುಪ್ಪು ಕೈಯೊಳಗೆ
ವಟಗುಡುತ ದಿಟ್ಟಿ ಇಳಿದೊಗೆದು । ಬೆಂಕಿಯಲಿ
ಕಟುಗಾಗಿ ಕಮರಿ ಹಾರೆಂದು ॥ ೬೦ ॥

ಬಿದಿಗಿ ಚಂದ್ರನುಬೆಳೆದು, ಹುದಗಿರುವ ಬೆಳಕನ್ನು
ಪದಪಿನಲಿ ಸುತ್ತ ಚೆಲ್ವಂತೆ । ಶಿವಕೂಸು
ನೆದರೊಡೆಯುವಂತೆ ದಿನಬೆಳೆದು ॥ ೬೧ ॥

ಕೂಸಾದ ಶಿವಲಿಂಗ, ಸೋಸಿನೋಡಿದನವಳ
ಸೂಸಿ ಹರಿಯಲೀ ಶಿವಭಕ್ತಿ । ಸಗ್ಗಕ್ಕೆ
ಮೂಸದುಳಿಲೆಂದು ಜಗದೊಳಗೆ ॥ ೬೨ ॥

ಶಿವಲಿಂಗನಾಡಿದನು, ಶಿವಲೀಲೆ ನಿತ್ಯದಲಿ
ಶಿವಚರಣಿ ನೋಡಿ ಕಣ್ತುಂಬ । ಹಿಗ್ಗಿರಲು
ನೆವತೊಟ್ಟ ನೊಮ್ಮ ಬಳಲುತಲಿ ॥ ೬೩ ॥

ಆರು ತಿಂಗಳ ಕೂಸು, ಚೀರಿ ಬದಲಾಯಿಸಿತು
ಚೀರಿ ಮೈಸೆಟೆಸಿ ಕಳೆಗುಂದಿ । ಸೆಟೆಬೇನೆ
ತೋರಿಸಿತು ಗುಡ್ಡಿ ಮೇಲೇರಿ || ೩೪

ಕಟವಾಯಿಯೊಳು ಜೊಲ್ಲು, ತಟತಟನೆ ಬಲುಸೋರಿ
ಸೆಟೆಬೇನೆ ಹೆಚ್ಚಿ, ಹೊಟ್ಟ್ಯುಬ್ಬಿ । ಒಡೆಯುವದೊ
ಪಟನೆಂದು ಭೀತಿ ತೋರಿಸಿತು || ೩೫

ನೋಡಿ ಬೇನೆಯ ಕೂಸ, ಕೋಡಿ ಹರಿಯಿತು ದುಃಖ
ಬಾಡಿ ಹೋಯೆಂದು ಎದೆಯತ್ತು । ಶಿವಶರಣಿ
ಪಾಡ ನೋಡೆನೆಲೆ ಶಿವಲಿಂಗ || ೩೬

ಅತ್ತು ಕರೆಯಲು ಬೇಡ, ಕುತ್ತು ದಾಟಲು ಬೇಕು
ಸುತ್ತ ನಾಡಿಂದ ಜಾಣರನು । ಕರೆತರಿಸಿ
ಬತ್ತಿರುವ ಕೂಸ ತೋರಿಸಲು || ೩೭

ಮಂತ್ರಗಾರರು ಊದಿ, ಯಂತ್ರಗಾರರು ಕಟ್ಟಿ
ತಂತ್ರಿಗಳು ಸಲಹೆ ನೀಡಿದರು । ಕೂಸಿಗೆಲೆ
ಮಂತ್ರ ತಂತ್ರಗಳು ಹುಸಿಯಾಗಿ || ೩೮ ||

ಕಾಡಸಿದ್ಧರ ಕೂಡ, ನಾಡಬುಡಬುಡಕಿಗಳು
ನಾಡಿಪರಿಕಿಸಲು ತಿಳಿಯದಲೆ । ಆರೋಗ
ಕಾಡಸೇರಿದರು ಹೇಳದಲೆ ‖ ೬೯ ‖

ರೋಗವರಿಯದೆ ವೈದ್ಯ, ಕಾಗಿಯೂದನು ನೋಡಿ
ಹೋಗಲಾಡಿಸದೆ ಆರೋಗ । ಬಲುಬೆದರಿ
ಬೇಗ ಮನೆಬಿಟ್ಟ ಚಿಂತೆಯಲಿ ‖ ೭೦ ‖

ಬೇಸರವ ಮಾಡದಲೆ, ಕೂಸ ತೋರಿಸಲವಳು
ನಾಶವಾಗುತಲಿ ಸಂಪತ್ತು । ಲೆಕ್ಕಿಸದೆ
ಲೇಸಾದರೆ ಸಾಕು ಶಿವಗೂಸು ‖ ೭೧ ‖

ಎಂದು ಚಿಂತಿಸಿ ನೊಂದು, ಉಂಬಳುಡಳಾ ಶರಣಿ
ನಂಬಿ ಹೇಳಿದುದ ಮಾಡಿದಳು । ಆರೋಗ
ಕುಂದದೆಲೆ ಕೂಸ ಕಂದಿಸಿತು ‖ ೭೨

ಸೆಟವಿದೇವಿಯು ನೆನೆದು, ಮುಡಪು ಕಟ್ಟಿದಳೆಂದು
ಹಟಬೇಡ ನನ್ನ ಮಗನೊಡನೆ । ಎಲೆದೇವಿ
ಚಟತರವೆ ಕೂಸ ಕೊಲ್ಲುವದು ‖ ೭೩

ಮಾಡಿದಳು ಆರೈಕೆ, ಪಾಡ ನೋಡದೆ ಶರಣೆ
ಕೇಡ ತಪ್ಪಿಸಲು ಹಗಲಿರುಳು । ಶಿವಕೂಸು
ನೋಡಲನುವಾಯ್ತು ಶಿವಭಕ್ತಿ ॥ ೭೪ ॥

ಹೆಚ್ಚಾಯಿತಾರೋಗ, ಬೆಚ್ಚಿಬಿದ್ದಳು ಶರಣೆ
ಎಚ್ಚರನೆ ತಪ್ಪಿ ಬೋರಾಡಿ । ಶೋಚದಲೆ
ಕಚ್ಚಿದಳು ತುಟಿಯ ಹಾಹಾರಿ ॥ ೭೫ ॥

ಮಗನೆ ನಿನ್ನೊಳು ನಾನು, ಬಗೆಯದಲೆ ಏನೊಂದು
ಹಗಲಿರುಳು ಎತ್ತಿ ಆಡಿಸಿದೆ । ನೀನಿಂದು
ಜಗತೊರೆಯೆ ನಾನು ಬಾಳುವೆನೆ ॥ ೭೬ ॥

ನಿನಗಾಗು ಗೋಳನ್ನು, ಮನನೋಡದಿನ್ಮುಂದೆ
ತನಯ ಹರಣವನು ನೀಗುವೆನು । ನಿನ್ನೊಡನೆ
ಎನಗೆ ಸಾಕಿನ್ನು ಈಲೋಕ ॥ ೭೭ ॥

ಗೋ! ಹಾರಿದೆನು ಶಿವನೆ, ಛೀ! ಹೋಗಲೀಜೀವ
ಭೋ! ಹೇಳೆಂದು ಉಪ್ಪರಗಿ । ಮೇಲಿಂದ
ಹಾ! ಹೋಕಾಲವೆ ಶಿವಲಿಂಗ ॥ ೭೮ ॥

ಉಪ್ಪರಿಗಿ ಮೇಲಿಂದ, ಧುಪ್ಪೆಂದು ಬೀಳುವಳು
ತಪ್ಪಿದೆನು ಹಾದಿ ನಾನೆಂದು । ಶಿವಲಿಂಗ
ಅಪ್ಪಿದನು ರೂಪ ತೊಟಗೊಂಡು || ೭೯ ||

ಎನ್ನೊಡನೆ ಮಾತಾಡು, ಸನ್ನುತದ ಶಿವಶರಣಿ
ಸನ್ನಿಧಿಯಲಿ ತಾಯಿ ನೀನೆನಗೆ । ಮುಣುಗಿದರೆ
ಎನ್ನ ಸಲಹುವರು ಯಾರುಂಟು || ೮೦ ||

ನಿಜಪದವ ನಿನಗೀನೆ, ನಿಜಶರಣಿ ಬೇಡೆನ್ನ
ನಿಜರೂಪ ತೋರಿ ಶಿವಲಿಂಗ । ನೆನ್ನುತಲಿ
ಭಜಿಸಿದಳು ಶರಣಿ ಕೈಮುಗಿದು || ೮೧ ||

ಕರುಣಿನಿಧಿ ಶಿವನೀನು, ಚಿರಸುಖದಿ ಇರುವಂತೆ
ವರನೀಡು ಎನಗೆ ಬೇಕೊಂದು । ಬೇಡಿಸಲು
ಜನನಕ್ಕೆ ಹರಸಿ ಕರೆದೊಯ್ದು || ೮೨ ||

ಕೈಲಾಸ ಗಿರಿಯೊಳಗೆ, ಮೇಲಿರಸಲವಳನ್ನು
ಲೀಲೆಯಲಿ ಹಾಡಿ ಶಿವಲೋಕ । ಬೆಳಗಾಗಿ
ಹೇಳಿದವು ಕಿರಣ ಜಗಕೆಂದು || ೮೩ ||

ಕಸುಕಾದ ದಾಳಿಂಬ, ರಸತುಂಬಿ ಒಡೆದಂತೆ
ನಸುಗೆಂಪು ಒಡೆದು ಮೂಡಲವು । ಶಿವಭಕ್ತಿ
ಹಸುಗೆಂಪು ಹರಿದು ಜಗತುಂಬಿ ॥ ೮೪ ॥

ಮಾಸದೀ ಶಿವಭಕ್ತಿ, ಸೋಸಿ ನೋಡಿದ ಶಿವನು
ಕೂಸಾಗಿ ಬಂದ ತಾಯೆಂದು । ಮ್ಹಾದೇವಿ
ಈಶ ಕಡೆಗಾತ ಮನಸೋತ ॥ ೮೫ ॥

ಬಿಜ್ಜ ಮಹಾದೇವಿಯು, ಉಜ್ವಳಶಿವಶರಣೆಯು
ಸಜ್ಜಿಯೊಳು ಶಿವನು ಕೂಸಾಗಿ । ಮಲಗಿರಲು
ಸಜ್ಜಾಗುಣತಿನಿಸಿ ಸಲುಹಿದಳು ॥ ೮೬ ॥

ಏಳುತಲಿ ನೆನೆಬೇಕು, ಹೇಳದಲೆ ನಿನ್ಹೆಸರ
ತಾಳಮದ್ದಲಿಯ ತಂಬೂರಿ । ಬಾರಿಸುತ
ಹೇಳಿ ನೆನೆಸಿದರೆ ಕೈಲಾಸ ॥ ೮೭ ॥

ಸುಂಕರಾಸಿಯ ಕಣಕೆ, ಸಂಕದೇವನ ಬಲವು
ಕಂಕಿಯಾ ಕಣಕೆ ನಿನಬಲವು । ಮಾದೇವಿ
ಸೊಂಕಿದರೆ ರಾಸಿ ಕಣತುಂಬಿ ॥ ೮೮ ॥

ಹಂತಿಯದು ಹಾಡೆಂದು, ಪಂತಕಟ್ಟೆಲು ಬೇಡ
ಕಂತಿ ಕರಗುವದು ನಿಂತಲ್ಲೆ । ಮಾದೇವಿ
ಕಂತು ಎದೆಯೊಳಗೆ ಹಾಡಿಸಲು ॥ ೮೯ ॥

ಶರಣು ಶರಣೆಂಬುವೆವು, ಹರಣ ಹಾರುವತನಕ
ಕರುಣಿಸರಿ ಶರಣೆ ಮಾದೇವಿ । ನಮಗಿನ್ನು
ಹರಸರಿ ಹುಲಸು ಹುಲ್ಲುಲ್ಲಿಗೊ ॥ ೯೦ ॥

ಮಂಗಲಂ



# ಬೇಡರಕನ್ನಯ್ಯ



ಸೂಚಕ ಪದ್ಯ:- ಬೇಡ ಬೇಟೆಗೆ ಹೋಗಿ, ಬೆಲ್ಲಪತ್ತರಿ ಕೊಯ್ದು
ಬೇಡಕನ್ನಯ್ಯ ಶಿವಪೂಜೆ । ಮಾಡಿದರೆ
ನಾಡೊಳಗೆ ನೋಡು ಶಿವರಾತ್ರಿ ॥ ೧ ॥

ಚೋಳರಾಯರ ನಾಡು, ಕಾಳತ್ತಿ ಊರೊಳಗೆ
ಪೋಳಗೇರಿಯೊಳು ನಾಯಕನು । ಕಳ್ಳಂದ
ಕಾಳಬಣ್ಣದಾ ಮೈಕಟ್ಟು ॥ ೨ ॥

ಹಿಂಡು ಬೇಡರೊಳಯ್ಯ, ಪುಂಡ ಬೇಡನು ಕಾಣೊ
ಗಾಂಡೀವಿ ಮೀರಿ ಕಣದೊಳಗೆ । ಭಕ್ತಿಯೊಳು
ಮಿಂಡನಿಗೆ ಮಿಗಿಲು ಮಂಡಲಕೆ ॥ ೩ ॥

ಕಣ್ಣು ಗುಲಗಂಜೇನ, ಬಣ್ಣ ಕಾರ್ಮೋಡೇನ
ಚೆನ್ನ ಮೈಕಟ್ಟು ಹುರಿಯೇನು । ಕಣ್ಣನಿಗೆ
ನುಣ್ಣನ್ನ ಮೀಸಿ ಬೆಡಗೇನು ॥ ೪ ॥

ಬಿಲ್ಲವಿದ್ಯೆಯು ಬಂಟ, ಹುಲ್ಲುಬೀಜಕೆ ಗುರಿಯು
ಮಲ್ಲ-ವಿದ್ಯೆಯೊಳು ಭೀಮಯ್ಯ । ಕಣ್ಣಯ್ಯ
ಭಿಲ್ಲಭೂಪತಿಯು ಹೌದೇನು ॥ ೫ ॥

ಬೇಟೆಯಾಡುವ ಬಂಟ, ಕಾಟ ನೀಗುವ ಬಂಟ
ಸಾಟಿ ಹೇಳವಗ ಹಿರಿಬಂಟ । ನಾಡೊಳಗೆ
ಈಟಿಯೊಳು ಬಂಟ ಸರಿಯಾರು ॥ ೬ ॥

ಕಾಳತ್ತಿನಾಥನದು, ಹೇಳಲಾರದ ಸತ್ಯ
ಕೇಳಿ ಮಂಡಲವು ನಡಗುವದು । ಕಾಳತ್ತಿ
ಬೀಳುವದು ಅಡಿಗೆ ಭಕ್ತಿಯಲಿ ॥ ೭ ॥

ಕಾಳತ್ತಿ ಗಿರಿಯೊಳಗೆ, ಏಳು ಕೊಳ್ಳವ ದಾಟಿ
ಕಾಳತ್ತಿನಾಥ ನರಮನೆಯ । ಬಾಗಿಲಕೆ
ಬಾಳ್ವೊತ್ತು ಪೂಜೆ ಕಣ್ಣನದು ॥ ೮ ॥

ಹಿಂಡು ಬೇಡರಗೂಡಿ, ಗಂಡ ನಾಯಕನಾಗಿ
ಕಂಡ ಕಾಡೊಳಗೆ ಕೂಗತಲಿ । ಕನ್ನಯ್ಯ
ತಂಡು ತಂಡಾಗಿ ಮಿಗತಟ್ಟಿ ॥ ೯ ॥

ಬಿಲ್ಲ ಕೈಯಲಿ ಹೂಡಿ, ಗಲ್ಲಕಂಬನು ಜಗ್ಗಿ
ಹುಲ್ಲೆ ಓಡುದಕೆ ಗುರಿಯಿಡಲು । ಆಹುಲ್ಲೆ
ಚೆಲ್ಲಿ ಹಿಂಡಗಲಿ ಮಯಾಗಿ ॥ ೧೦ ॥

ಬೆನ್ನಟ್ಟಿ ಬರುತಿರುವ, ಕನ್ನಯ್ಯಗಂಜುತಲಿ
ಕಿನ್ನರಿಯ ವೇಗ ಓಡುತಲಿ । ಶಿವಲಿಂಗ
ಬೆನ್ನ ನಾ ಬಿದ್ದೆ ದಯಮಾಡು ॥ ೧೧

ಶಿವಲಿಂಗ ಗುಡಿಹೊಕ್ಕು, ಜೀವಕಂಜ್ಯಡಗುತಲಿ
ಶಿವನೆ ಕರುಣಾಳು ಸಲುಹೆಂದು । ಕೈಮುಗಿಯೆ
ಶಿವನಕ್ಕು ಮಾಯೆ ಹೊಡಿದನು ॥ ೧೨ ॥

ಕಾಣ ಕಾಣುತಲದನ, ಕಾಣುತಲಿ ಅಡಗುದನ
ಬಾಣ ಬತ್ತಳಿಕೆ ಕೆಳಗಿಳಿವಿ । ಕನ್ನಯ್ಯ
ಬಾಣ ಗೊಲಿದವನೆ ಕಾಪಾಡು ॥ ೧೩ ॥

ನನ್ನಯ್ಯ ನನ್ನೊಡೆಯ, ಮನ್ನಣೆಯ ನೀನೀಡು
ಕನ್ನಯ್ಯ ನುಡಿವ ನುಡಿಕೇಳು । ಚಣದೊಳಗೆ
ತಿನ್ನುದಕೆ ನಿನಗೆ ಸರಿಪಾಲು ॥ ೧೪ ॥

ಬೇಟೆಬಿದ್ದರೆ ದೇವ, ಸೂಟೆಯಲಿ ನಾಕುಣಿದು
ಆಟಾಡಿ ಇರುಳ ಕಳೆಯುವೆನು । ಸಾಕಾಗಿ
ಊಟ ನೀಡುವೆನು ಮಾಂಸವನು ‖ ೧೫ ‖

ಬೇಡನದು ಈ ಭಕ್ತಿ, ಕಾಡೆಂದು ಅನಬೇಡ
ಮಾಡುವೆನು ಸೇವೆ ಕಡೆತನಕ । ಶಿವಲಿಂಗ
ನಾಡಾಣೆ ನನ್ನ ಮನದಾಣೆ ‖ ೧೬ ‖

ಕರಿಗೊರಲ ಭೂಷಣನೆ, ಕರಿದೊಗಲ ಹೊದ್ದವನೆ
ಹರಹರನೆ ಶಿವನೆ ಭಜಿಸುವೆನು । ಕಾಳತ್ತಿ
ಗುರುದೇವ ಮೆಚ್ಚಿ ನೀ ವರಿಸು ‖ ೧೭ ‖

ನಸುನಗುತ ಶಿವಲಿಂಗ, ಹಸನ ಭಕ್ತಿಗೆ ಮೆಚ್ಚಿ
ಗಸನೆ ಕಾಣಿಸಿದ ಗುಡಿಮುಂದ । ಆಚಿಗರೆ
ನುಸುಳಿ ಕಾಡೊಳಗೆ ಓಡುತಲಿ ‖ ೧೮ ‖

ಬೆಟ್ಟಬೆಟ್ಟವ ತಿರುಗಿ, ಕಟ್ಟಕಡೆ ಕನ್ನಯ್ಯ
ಬಿಟ್ಟನಂಬುಗಳ ಗುರಿಯಿಟ್ಟು । ಮುಗ್ಗರಿಸಿ
ಹೊಟ್ಟೆ ಮೇಲಾಯ್ತು ಆ ಚಿಗರೆ ‖ ೧೯ ‖

ಹಿಗ್ಗುತಲಿ ಅರಳುತಲಿ, ಸಗ್ಗ ಮೂಗೇಣಾಗಿ
ನುಗ್ಗಿ ಒಳಗುಡಿಯ ಅಂಗಳಕೆ । ಕಣ್ಣಿಂದ
ಗೊಗ್ಗಯ್ಯನಡಿಗೆ ಶರಣೆಂದ || ೨೦ ||

ಬಂದಿರುವೆ ನನ್ನೊಡೆಯ, ತಂದಿರುವೆ ತಿನ್ನುದಕೆ
ಇಂದುಶೇಖರನೆ ಹಸಿದಿರುವೆ । ನಕ್ಕೆಂದು
ಇಂದು ನೀ ಹಸಿವ ಹಿಂಗಿಸಲಿ || ೨೧ ||

ತಾಯಿಯಿಲ್ಲದ ನಿನ್ನ, ಕಾಯ ಬಲು ಬಾಡಿಹುದು
ಬಾಯೂರಿ ಮಾತು ಬರವೊಲ್ಲು । ಬಿಸಿರಗುತ
ಸುಯ್ಯೆಂದು ಕುಡಿದು ಮಾತಾಡು || ೨೨ ||

ಕೆಟ್ಟೆಂದು ಕಿರಾತನ, ಮುಟ್ಟಲಾರೆನ್ನದಲೆ
ಸುಟ್ಟಿಟ್ಟ ಮಾಂಸ ಸರಿಪಾಲ । ಕೈಹಾಕಿ
ಇಟ್ಟಿಹೆನು ಸಲಿಸೊ ಜಗದೊಡೆಯ || ೨೩ ||

ಭಕ್ತಿಗೆಲ್ಲಿಯ ಕೊರತೆ, ಮುಕ್ತಿಗೆಲ್ಲಿಯ ಆಶೆ
ರಕ್ತಮಾಂಸೆಡೆಯ ಮಾಡುದಕೆ । ಮೆಚ್ಚೆಂದ
ಭಕ್ತನಿಧಿ ಶಿವನು ಕಾಡೊಳಗೆ || ೨೪ ||

ಮಾಂಸ ತಿನ್ನುವನೆಂದು, ಹಿಂಸೆ ಮಾಡುವನೆಂದು
ಸಂಶಯದಿ ಕದ್ದು ನುಡಿದವರ । ಸೀಳುವೆನು
ಕಂಸನ್ನ ಸೀಳಿ ಒಗೆದಂತೆ || ೨೫ ||

ಸಂಜೆಯಾಗುತ ಬರಲು, ಅಂಜಬೇಡಲೆ ಶಿವನೆ
ಪಂಜ್ಹಿಡಿದು ಪಹರೆ ಮಾಡುವೆನು । ನಿರುಂಬಳ
ಮುಂಜಾನೆ ತನಕ ಗೈನಿದ್ದೆ || ೨೬ ||

ಹುಲಿಕರಡಿ ಸದ್ದುಗಳ, ಬಲಿತಟ್ಟಿ ಅಡಗಿಸಿದ
ಕಲಿತನದಿ ಕಾಯ್ದು ಇರುಳೆಲ್ಲ । ಕನ್ನಯ್ಯ
ಬಲವಂತ ಮುಗ್ಧ ಶರಣಯ್ಯ || ೨೭ ||

ಪೂರದಿಕ್ಕಿನ ದೇವ, ಮರಗುತಲಿ ಮನದೊಳಗೆ
ಶರಣ ಕನ್ನನಿಗೆ ಅನುವಾಗಿ । ಮುಂಚಿತವೆ
ನೆರವಾಗಿ ಉದಯ ಹರಿಸಿದನು || ೨೮ ||

ಸುತ್ತ ಸೂಸುವ ಕಿರಣ, ಎತ್ತ ಹರಿದವು ನೋಡು
ಉತ್ತಮರ ಭಕ್ತಿ ಸಾರುದುಕೆ । ಕಾಳತ್ತಿ
ಗುತ್ತ ಗುಡಿಯೊಳಗೆ ಹರಿಯುತಲಿ || ೨೯ ||

ಕಾಳತ್ತಿನಾಥನಿಗೆ, ಚೋಳಭಕ್ತರು ಹೋಗಿ
ಮೇಳೈಸಿ ಗುಡಿಯ ಸೇರುದಕೆ। ಕಳ್ಳಂದ
ಕೇಳಿ ಕೈಮುಗಿದು ಗುಡಿಬಿಟ್ಟ ॥ ೩೦ ॥

ಮನಗಣ್ಣು ಗುಡಿಯೊಳಗೆ, ಜನಗಣ್ಣು ಹೊರಹೊರಗೆ
ಬನದೊಳಗೆ ಕನ್ನ ನಡೆಯುತಲಿ। ತಿರುತಿರುಗಿ
ತನುವಿಗಿಂಬನ್ನು ಬೇಡುತಲಿ ॥ ೩೧ ॥

ಹಿಂದೊಮ್ಮೆ ನೋಡುತಲಿ, ಮುಂದ್ಹೆಜ್ಜೆ ಹಾಕುತಲಿ
ಕಂದಿ ಮನದೊಳಗೆ ಹಳಿಯುತಲಿ। ತನ್ನಿರುವ
ಇಂದು ಸಾಕೆಂದು ಕುಗ್ಗುತಲಿ ॥ ೩೨ ॥

ತಂದೆ ನಿನ್ನಾನಗಲಿ, ಮುಂದೆ ಹೋಗಲಿ ಹೇಗೆ
ಕಂದನಿಗೆ ಕೈಯ ಬಿಡಬೇಡ। ಶಿವಲಿಂಗ
ತಂದು ಉಣಿಸುವೆನು ಹಸಿಮಾಂಸ ॥ ೩೩ ॥

ಮಂಜಂದು ಹರಿದಡಗಿ, ಮುಂಜಾವು ಉರುಳುತಲಿ
ನಂಜುಂಡ ಶಿವಗೆ ಪೂಜಾರಿ। ಹೊರಹೊಂಟ
ರಂಜಣಾಗಿ ನೀರ ಹೊತಗೊಂಡು ॥ ೩೪

ಒಳಗುಡಿಯ ಅಂಗಳಕೆ, ವೊಳಸಾಗಿ ಹೋಗುದಕೆ
ಬೆಳಕಿನಲಿ ಕಂಡ ರಗತೆಲವು । ಮಾಂಸಗಳ
ಮಳಮಳಿಸಿ ಹೊಲೆಯು ಗುಡಿಯಂದು ॥ ೩೫ ॥

ತಂದ ಕರಣಗಳುಗ್ಗಿ, ಚೆಂದದಲಿ ಗುಡಿಬಳಿದು
ಮಿಂದೂ ಮತ್ತೊಮ್ಮೆ ಹೊಂಡದೊಳು । ಪೂಜಾರಿ
ಬಂದು ಸಾಗಿಸಿದ ಶಿವಪೂಜೆ ॥ ೩೬ ॥

ಬಿಲ್ವದಳಗಳನೆತ್ತಿ, ಚೆಲ್ವ ಹೂಗಳ ಕೊಯ್ದು
ಜಲ್ಲಿಗಳ ತುಂಬಿ ಒಳತಂದು । ವಟಗುಡುತ
ಗೊಲ್ಲನಿಗೆ ಪೂಜೆ ಮುಗಿಸಿದನು ॥ ೩೭ ॥

ಹಾರುವನ ಹರಭಕ್ತಿ, ಮೂರುದ್ದ ಮಂತ್ರಗಳು
ಹಾರಾಡಿ ವೇದ ವೋದುವದು । ಬೇಸಾಯ
ಹಾರುವಗೆ ಹರನು ಮೆಚ್ಚುವನೆ ॥ ೩೮ ॥

ಬೀಗ ಬಿಗಿಹಾಕುತಲಿ, ನೀಗಿದೆನು ಕಂಠಕವ
ಬಾಗಿಲವ ಮುರಿವ ಬಂಟ್ಯಾರು । ಕಾಡೊಳಗೆ
ನಾಗಭೂಷಣನ ಕಾವಲಿಯು ॥ ೩೯ ॥

ಹೊಟ್ಟೆ ಬಲು ಹಸಿದಿರಲು, ತಟ್ಟನವನೇಳುತಲಿ
ಜಟ್ಟಿ ಕಡಿತೆಂದು ಗುಡಿಬಿಟ್ಟು । ಮನೆಹೊಕ್ಕ
ಜುಟ್ಟಿಗಳ ಮೇಲೆ ಕೈಹಾಕಿ ॥ ೪೦

ನೆತ್ತಿಯೊಳು ದಿನಬಿಸಿಲು, ಹೊತ್ತೇರಿ ಬರುತಿರಲು
ಸುತ್ತ ತಿರುಗಾಡಿ ಕಳ್ಳಂದ । ಬೇಟೆಯನು
ಹೊತ್ತು ಅವಸರದಿ ಗುಡಿಹೊಕ್ಕ ॥ ೪೧

ಹಸಿದಿರುವೆ ಶಿವಲಿಂಗ, ಗಸನೆ ಉಣಬಡಿಸುವೆನು
ತುಸುತಗೆಯೊ ಕದವ ನನ್ನವನೆ । ಗುರುದೇವ
ರಸಮಾಂಸ ಕುಚ್ಚಿ ಉಣಿಸುವೆನು ॥ ೪೨

ನೆಚ್ಚಿಬಂದೆನು ಶಿವನೆ, ಮೆಚ್ಚಿ ಉಣ್ಣಲು ಬೇಕು
ಕುಚ್ಚಿರುವ ಮಾಂಸ ರುಚಿನೋಡು । ನೋಡದಲೆ
ಹುಚ್ಚ ನಾನಲ್ಲ ಉಣಿಸುದಕೆ ॥ ೪೩ ॥

ಬಾಣಗಳ ಮೊನೆನಟ್ಟು, ಗೋಣು ನಂಜೇರಿಲ್ಲ
ನೇಣು ಮಲುಬಿದ್ದು ಉರುಲಾಗಿ । ಕುತ್ತಿಗೆಯು
ಗೇಣುದ್ದ ಸೀಳಿ ಜೀವ್ಹೋಗಿ ॥ ೪೪

ಕೆಂಪು ಬರುತನಕಾಸಿ, ಕೆಂಪು ನೆತ್ತರ ಸಾರ
ತಂಪು ಮಾಡದಲೆ ನೀಡುವೆನು । ಉಂಡೊಡನೆ
ಜಂಪು ಹತ್ತುವದು ಬೆಳತನಕ || ೪೫ ||

ಕನ್ನಯ್ಯನಾದರದ, ಕನ್ನೆ ಭಕ್ತಿಗೆ ಮೆಚ್ಚಿ
ಪನಂಗಧರನು ಕದತಗೆದು । ನನ್ನೆಯಲಿ
ಜೊನ್ನ ತಲೆಯೊಡೆಯ ನಕ್ಕುಂಡ || ೪೬ ||

ಬೇಡರೋಣೆಯ ಗತ್ತು, ಕಾಡ ಕುಣಿತವ ಕುಣಿದು
ಹಾಡ್ಯಾಡಿ ಕಳೆದ ಕತ್ತಲೆಯ । ಕನ್ನಯ್ಯ
ನೋಡ್ಯಾಡಿ ಕಳೆದ ನಗೆಮುಖವ || ೪೭ ||

ಕೋಳಿ ಕೂಗಿತು ಕೂಗಿ, ಹೇಳುತಲಿ ಜಗಕೆಲ್ಲ
ಇಳೆಬೆಳಗುವೊಡೆಯ ಬಂದೆಂದು । ಗುಂಗಿಗಳ
ಬಳಗೆದ್ದು ಹಾಡಿ ಬನದೊಳಗೆ || ೪೮ ||

ಜೊನ್ನನಾ ಹೊನ್ನುರಿಯು, ನಿಮ್ನಸಾಗರ ಮುಳಗಿ
ಬೆನ್ನೊಳಗೆ ಬಿಡಲು ಹೊಗೆಮಂಜು । ಹೂಬಿಸಿಲ
ಬನ್ನ ಬಡಿಸುವದು ಚಣತನಕ || ೪೯ ||

ಮೂಡಲದ ಕೆಂಪಿನೊಳು, ಹಾಡಿದವು ಹಕ್ಕಿಗಳು
ನಾಡ ನುಂಗುತಲಿ ಹೊಬಿಸಿಲು । ಕತ್ತಲೆಯು
ಓಡಿ ಪವಣಕೆ ದಿನಕಂಜಿ || ೫೦ ||

ಮೂಡಲದ ಹೆಣ್ಣೊಡನೆ, ಆಡಿ ಓಕಳಿಯುಗ್ಗಿ
ಹೂಡಿ ರಥವೇರಿ ಹೊಡೆಯುತಲಿ । ಹೆಣ್ಣೊಡನೆ
ಜೋಡಾಗಿ ಬರುವ ಬಂಟ್ಯಾರೊ || ೫೧ ||

ಅಂದಿನದ ಸೂದಿನಕೆ, ಹೊಂದಿ ಶಿವಯೋಗಾಗಿ
ಇಂದು ಶೇಖರನ ಶಿವಪೂಜೆ । ಮಾಡುದಕೆ
ಬಂದು ಪೂಜ್ಯಾರಿ ಗುಡಿಹೊಕ್ಕ || ೫೨ ||

ಮತ್ತೆ ಕಾಣಲು ರಕುತ, ಪಿತ್ತ ತಲೆಗೇರುತಲಿ
ಹುತ್ತೊಳ್ಗುವ ಹಾವ ಕಲ್ಲೆತ್ತಿ । ಒಗೆವಂತೆ
ನೆತ್ತರವು ಕಾಯ್ದು ಪೂಜಾರಿ || ೫೩ ||

ಕೆಟ್ಟೆ ಈ ಕಿರಾತನ, ಬಿಟ್ಟು ಬಿಡದಲೆ ಕೊಂದು
ಸುಟ್ಟು ಬೂದಿಯನು ಮಾಡಿಸುವೆ । ನೆಂದೆನುತ
ಸಿಟ್ಟಿನಲಿ ಪೂಜೆ ಮುಗಿಸಿದನು || ೫೪ ||

ಮನೆಮನೆಗೆ ತಿರುಗಾಡಿ, ಜನಕೆಲ್ಲ ತಿಳಿಸಿದನು
ನುಣುಪ ಹದನುಳ್ಳ ಚೂರಿಯನು । ತಿರಿತಂದು
ಮನಸು ತಣಿವಂತೆ ಮಾಡುವೆನು ॥ ೫೫ ॥

ನಡು ಹಗಲು ಮೀರುತಲಿ, ಬಡನೆ ಊರಿಗೆ ಬಂದು
ತಡೆಯದಲೆ ಚೂರಿ ದೊರಕಿಸಿದ । ಪೂಜ್ಯಾರಿ
ನಡೆದ ಕನ್ನನನು ಕೊಲ್ಲುದಕೆ ॥ ೫೬ ॥

ಲಿಂಗದಾ ಕಣ್ಣೊಡೆದು, ಗಂಗ್ಯಾಗಿ ನೆತ್ತರವು
ಅಂಗಳಕೆ ಹರಿದು ಮಡಗಟ್ಟಿ । ನಿಂತಿರಲು
ದಂಗಾಗಿ ನಿಂತ ಪೂಜ್ಯಾರಿ ॥ ೫೭ ॥

ಏನು ಬರುವದೊ ದೇವ, ನಾಣ ನಮಗೇಟಿಲ್ಲ
ಹಾನಿ ತಟ್ಟುವದು ಹೇಳಿನೆಗೆ । ನಾಡೊಳಗೆ
ಏನು ಶಾಂತಿಯನು ಮಾಡಿಸಲಿ ॥ ೫೮ ॥

ಊರ ಹಿರಿಯರು ಕೂಡಿ, ತೇರನಿಂದೆಳೆಯುವೆವು
ಭೂರಿ ಜಂಗಮರ ಉಣಿಸುವೆವು । ಶಿವಲಿಂಗ
ಸೋರ್ವ ನೆತ್ತರಕೆ ತಡೆಹಾಕು ॥ ೫೯

ಕಾರಂಜಿ ಪುಟದಂತೆ, ಓರೆಗಣ್ಣೊಳಗಿಂದ
ಸೋರಿ ನೆತ್ತರವು ಝುರಿಯಾಗಿ । ಮಣ್ಣುಂಡು
ತಾರೆಗಳ ಬಾನು ಕಿಡಿಕಾರಿ ॥ ೬೦ ॥

ಅಂಜುತಲಿ ಪೂಜ್ಯಾರಿ, ಇಂಬು ಹುಡುಕುತ ಬರಲು
ಸಂಜೆಯೊಳು ಊರ ಜನಗೂಡಿ । ಕಾಳತ್ತಿ
ನಂಜುಂಡಗೊಡ್ಡಿ ಬೇಡುತಲಿ ॥ ೬೧ ॥

ಕಲ್ಲ ಕೋಳಿಯು ಕೂಗಿ, ಹುಲ್ಲ ಕಡ್ಡಿಯ ಕಚ್ಚಿ
ನಿಲ್ಲದೆಲೆ ಕಣ್ಣ ನೆತ್ತರವು । ಸೋರಿದರೆ
ಗಲ್ಲು ಬೀಳುವದು ಈ ಜಗಕೆ ॥ ೬೨ ॥

ಹುಟ್ಟಿಸಿದ ಈ ಲೋಕ, ಸಿಟ್ಟಿನಲಿ ಕೊಲಬೇಡ
ನಿಟ್ಟುಸಿರ ಬಿಡಲು ಜನವೆಲ್ಲ । ಶಿವಲಿಂಗ
ನಿಷ್ಠೆ ಕಾಣುದಕೆ ನಸುನಕ್ಕು ॥ ೬೩ ॥

ಕಣ್ಣು ಹೆಚ್ಚುಬ್ಬಿಸಿದ, ಹುಣ್ಣಾಗಿ ನೆತ್ತರವು
ಕೆನ್ನೆಯೊಳು ಹರಿದು ಹೊಳೆಯಾಗಿ । ಜನಕಂಡು
ಇನ್ನು ಕೇಡೆಂದು ಗುಡಿಬಿಟ್ಟು ॥ ೬೪ ॥



ಹೊತ್ತ ಗೂಡೆದ್ದವನು, ಮತ್ತೆ ಬೇಟೆಗೆ ಕನ್ನ
ಚಿತ್ತ ಒಂದಾಗಿ ಹೊರಹೊಂಟ । ಸೊಬಗಿನಲಿ
ಎತ್ತ ನೋಡಿದರು ಬನಸಿರಿಯು ‖ ೬೫ ‖

ಸುತ್ತ ಕಾಡವ ತಿರುಗಿ, ಉತ್ತರಕೆ ಸಾಗಿದನು
ಹುತ್ತ ಬದಿಯಲ್ಲಿ ಬಲಿಹಾಕಿ । ಕಣ್ಣಯ್ಯ
ಪತ್ರಿಗಿಡವೇರಿ ಶಿವನೆಂದು ‖ ೬೬ ‖

ಚೆಲ್ಲಿರುವ ಬಲಿಯನ್ನು, ಹುಲ್ಲೆ ನೋಡದೆ ಇರಲಿ
ಚೆಲ್ಲಿದನು ಕೊಯ್ದು ಪತ್ರಿಗಳ । ದಳಬಿದ್ದು
ಕಲ್ಲ ಶಿವಲಿಂಗ ಮರೆಯಾಗಿ ‖ ೬೭ ‖

ಶರಣನಿಗೆ ಬಲುಮೆಚ್ಚಿ, ಮರಣ ಬಂದರು ಬರಲಿ
ಹರನು ಚಿಗರ್ಯಾಗಿ ಮೇಯುತಲಿ । ಅಬಲೆಯ
ಸರದೊಳಗೆ ಸಿಕ್ಕು ಹಲಬುತಲಿ ‖ ೬೮ ‖

ಗಿಡದ ಮೇಲಿನ ಕಣ್ಣ, ತಡಮಾಡದಿಳಿಯುತಲಿ
ಹಡದಪ್ಪಗಾದಿ ಎಡೆಯೊಂದು । ಎಲೆಚಿಗರೆ
ಪಡೆದ ಶಿವಯೋಗ ಈ ದಿವಸ ‖ ೬೯ ‖

ಹೊತ್ತು ಕತ್ತಿನಮೇಲೆ, ಸತ್ತ ಚಿಗರೆಯ ಕನ್ನ
ಬಿತ್ತು ಶಿವಬೆಳಕು ಕಾಡೊಳಗೆ । ಕನ್ನನಿಗೆ
ಎತ್ತ ನೋಡಿದರು ಶಿವಲಿಂಗ ॥ ೭೦ ॥

ಹೊಂಡದೊಳಗಿನ ನೀರ, ಗುಂಡಬಾಯೊಳು ತುಂಬಿ
ಕಂಡ ಹೊನ್ನವರಿ ಕೈಯೊಳಗೆ । ಹೊತಗೊಂಡು
ಪುಂಡ ಕನ್ನಯ್ಯ ಗುಡಿಹೊಕ್ಕ ॥ ೭೧ ॥

ಚೆಂಡಿಗೆ ಚಾಮುಂಡಿಗೆ, ಚೆಂಡಾಡ್ವ ಬೇಡನಿಗೆ
ಉಂಡೆಡೆಯ ಮಾಡ್ವ ಹುಂಡನಿಗೆ । ಗೊತ್ತೇನು
ರುಂಡಧಾರಿಯಾ ಶಿವಪೂಜೆ ॥ ೭೨ ॥

ಹಾರುವನ ಹೂಪೂಜೆ, ಹಾರವನೆ ಹರಿದೂಗೆದು
ನೀರ ಮುಖಕುಗಳಿ ಕನ್ನಯ್ಯ । ಬಲಗಾಲ
ಊರಿ ಮೈತಿಕ್ಕಿ ಮೈದೊಳೆದ ॥ ೭೩ ॥

ಹೊನ್ನವರಿ ಹೂವೆತ್ತಿ, ಕನ್ನಯ್ಯ ತಲೆಗಿಡುತ
ಕಣ್ಣು ನೆತ್ತರವ ಸೋರುವದು । ಕಾಣುತಲಿ
ಕಣ್ಣಗತ್ತಲೆಯು ಬವಳ್ಯಾಗಿ ॥ ೭೪ ॥

ಕಾಳಕೂಟದ ವಿಷವ, ಹೇಳದಲೆ ನುಂಗಿದರು
ಗೋಳು ನಿನಗೇನು ಆಗಿಲ್ಲ । ಮುಕ್ಕಣ್ಣ
ಹೇಳು ಕಣ್ಣೊಡೆದ ಕಾರಣವ ॥ ೭೫ ॥

ಬೇಟೆಗಾರರು ಬಂದು, ಚೂಟಿದರೆ ನಿನಕಣ್ಣ
ಕಾಟಿ ನಿನಗೆಲ್ಲಿ ಕೂತಿತ್ತೊ । ನನ್ನಯ್ಯಾ
ಮೇಟಿ ನೀಜಗಕೆ ಗತಿಯೇನು ॥ ೭೬ ॥

ಸಾಟಿ ಮಾಡುವೆ ಕಣ್ಣ, ನೋಟಿ ಭೀಕರವೆನಗೆ
ಪಾಟಿ ನೋಡುದಕೆ ಮನಸ್ಸಿಲ್ಲ । ಕನ್ನಯ್ಯ
ಮೀಟಿ ಎಡೆಗಣ್ಣ ಊರಿದನು ॥ ೭೭ ॥

ಎಡಗಣ್ಣು ಹೊಳಪಿನಲಿ, ನಡುಗಣ್ಣ ಮೀರುತಲಿ
ಜಡವಾಗಿ ಸೋರಿ ಬಲಗಣ್ಣು । ಉಬ್ಬೊಡೆದು
ಮಡರಗುತ ಸೋರಿ ಹರಿಯುತಲಿ ॥ ೭೮ ॥

ನೋಡಲಾರೆನು ದೇವ, ಬೇಡುವೆನು ಎದೆಯೊಡ್ಡಿ
ಬೇಡ ಕಣ್ಣುಗಳು ಕನ್ನನಿಗೆ । ಕುರುಡಾಗಿ
ಬೇಡಿ ತಿರಿದುಂಡು ಬಾಳುವೆನು ॥ ೭೯ ॥

ಬಲಗಾಲ ಜಿಪ್ಪೆತ್ತಿ, ಬಲಗಣ್ಣ ಮೇಲಿಟ್ಟು
ಕಲುಕದಲೆ ಮೀಟಿ ಬಲಗಣ್ಣ । ಶಿವಗಣವು
ಒಲಿದು ಶರಣೆಂದು ಕೊಂಡಾಡಿ ‖ ೮೦ ‖

ಶರಣ ಕನ್ನಗೆ ಮೆಚ್ಚಿ, ನರಲೋಕ ತಿಳಿಲೆಂದು
ಗಿರಿಜೆ ಯೊಡಗೂಡಿ ಹರಬಂದು ಶರಣನಿಗೆ
ಹರಸಿ ಶಿವಪದವ ನೀಡಿದನು ‖ ೮೧ ‖

ಕಾಳತ್ತಿ ಊರೊಳಗೆ, ಹೇಳಲಾರದ ಭಜನೆ
ತಾಳ ಮದ್ದಳೆಯು ತಂಬೂರಿ । ಹಾಡಿದವು
ಕಾಳತ್ತಿ ಕನ್ನ ಭಕ್ತೆಂದು ‖ ೮೨ ‖

ಶಿವಯೋಗ ನರಿಯದಲೆ, ಶಿವಪೂಜೆ ಮಾಡಿದನು
ಶಿವಭಕ್ತಿ ಕರಣ ಮೂಲಾಗಿ । ಕನ್ನಯ್ಯ
ಶಿವಪದವ ಪಡೆದ ನಾಡೊಳಗೆ ‖ ೮೩ ‖

ಬೇಡ ಬೇಟೆಗೆ ಹೋಗಿ, ಬೆಲ್ಲಪತ್ತರಿ ಕೊಯ್ದು
ಬೇಡಕನ್ನಯ್ಯ ಶಿವಪೂಜೆ । ಮಾಡಿದರೆ
ನಾಡೊಳಗೆ ನೋಡು ಶಿವರಾತ್ರಿ ‖ ೮೪ ‖

ಧನ್ಯ ನೀನ್ಮಾಡುವದು, ಕನ್ನಯ್ಯ ಸುಗ್ಗಿಯೊಳು
ಉಣ್ಣುವದು ಲೋಕ ಶಿವಭಕ್ತಿ । ಒಕ್ಕಲಿಗ
ಬಣ್ಣಿಸುವ ಹಾಡಿ ಶರಣೆಂದು || ೮೫ ||

ಬೆಳ್ಳಿ ಮೂಡುವ ಮುನ್ನ, ಕೊಳ್ಳಕೊಳ್ಳವ ತಿರುಗಿ
ಕಳ್ಳಂದ ಬೇಟೆಯಾಡುವನು । ಕಣದೊಳಗೆ
ಒಳ್ಳೆ ಹಂತ್ಯಾಗಿ ಹುಲುಸಾಗಿ || ೮೬ ||

ಕನ್ನ ಬೇಟೆಯನಾಡಿ, ಹೊನ್ನ ಬೆಟ್ಟವ ತಿರುಗಿ
ಪನ್ನಂಗಧರೆಗೆ ಎಡೆಮಾಡಿ । ನರಿಕೂಗಿ
ಸಣ್ಣರಾಸ್ಯಕ್ಕಿ ಕಣತುಂಬಿ || ೮೭ ||

ಹಂತಿಯದು ಹಾಡೆಂದು, ಪಂತಕಟ್ಟಲು ಬೇಡ
ಕಂತಿ ಕರಗುವದು ನಿಂತಲ್ಲೆ । ಕನ್ನಯ್ಯ
ಕುಂತು ಎದೆಯೊಳಗೆ ಹಾಡಿಸಿದ || ೮೮ ||

ಶರಣು ಶರಣಂಬುವೆವು, ಹರಣ ಹಾರುವ ತನಕ
ಕರುಣಸರಿ ಶರಣ ಕನ್ನಯ್ಯ । ನಮಗಿನ್ನು
ಹರಸರಿ ಹುಲುಸು ಹುಲ್ಲುಲ್ಲಿಗೊ || ೮೯ ||

— ಮಂಗಲಂ —

# ಕೋಳೂರ ಕೊಡಗೂಸು

ಸೂಚಕ ಪದ್ಯ :– ಹೆತ್ತವರ ನೋಂಪೆಯನೆ, ಮುತ್ತಾಗಿ ಪಾಲಿಸಲು
ಸತ್ಯ ಶಿವಶರಣೆ ಕೊಡಗೂಸು । ಶಿವಲಿಂಗ
ಎತ್ತಿ ತನ್ನೊಳಗೆ ಒಳಕೊಂಡ ॥ ೧ ॥

ಹಾಡುದಕೆ ಮುನ್ನವೇ, ಬೇಡುವೆವು ಕೈಮುಗಿದು
ಈಡೇರಿಸೆಮ್ಮ ಕೋರಿಕೆಯ । ಕೊಡಗೂಸು
ಬಾಡದಿಹ ಹೂವು ಶಿವಪದಕೆ ॥ ೨

ಬಾಡದೀ ಹೂಹಾಡ, ಕಾಡಮಲ್ಲಿಗೆಯೆಂದು
ಕಾಡ ಗಾಳಿಗಳು ಪರಿಮಳವ । ಹೊತ್ತೊಯ್ದು
ನಾಡೊಳಗೆ ಸುಳಿದು ಬೀಸವವು ॥ ೩ ॥

ಸಂಗಯ್ಯ ಸೋಮಲೆಯು, ದಂಪತಿಗಳಿರುತಿರಲು
ಲಿಂಗಿಗಳು ಮಗಳು ಕೊಡಗೂಸು । ಕೋಳೂರ
ಸಂಗಮೇಶನಿಗೆ ಘನಭಕ್ತಿ ॥ ೪ ॥

ಈಸನೋಂಪೆಗೆ ನಿತ್ಯ, ಮೀಸಲ್ಹಾಲೀಯಲು
ಈಸಭಕ್ತನಿಗೆ ಹಸುವೊಂದು । ಮನೆಯೊಳಗೆ
ಮಾಸದಲೆ ಭಕ್ತಿ ನಡೆದಿತ್ತು ॥ ೫ ॥

ಹುಂಜ ಕೂಗುವ ಮುನ್ನ, ಮುಂಜಾನೆ ಏಳುತಲಿ
ರಂಜಣಗಿ ನೀರ ಎರಕೊಂಡು । ಪೂಜಿಸುವ
ಕೆಂಜೆಡೆಯ ಶಿವಗ ಹಾಲೆರದು ॥ ೬ ॥

ನೆರೆಯೂರ ದೇವರಿಗೆ, ಹರಕೆಯದು ದಿನಬಿಂತು
ತರಳೆ ಕೊಡಗೂಸ ಬಳಿಕರೆದು । ಹೇಳಿದರು
ಮರೆಯದಿರೆ ಹಾಲ ಸಂಗನಿಗೆ ॥ ೭ ॥

ಮೂರು ದಿನಗಳ ತಡೆದು, ತೀರೆಳಿದು ಬರುವವೆಲೆ
ಹಾಕೈಸಿದೊಷೆವೆ ನಾತರುವೆ । ನಮ್ಮುದ್ದೆ
ತೀರಿಸೀ ವ್ರತವ ಬರುತನಕ ॥ ೮ ॥

ಎಂದು ಕಳಿದರು ತಂದೆ, ಅಂದು ಮಗಳನೆ ತಾಯಿ
ಅಂದದಲಿ ಹೇಳಿ ತೆರಳಿದರು । ಕೊಡಗೂಸು
ಮಿಂದು ಮರುದಿನವೆ ಮನೆಯೊಳಗೆ ॥ ೯ ॥

ಯಾಕೆ ನೀನೆನ್ನೊಡನೆ, ಮೂಕಾಗಿ ಕುಳಿತಿರುವೆ
ಬೇಕು ಬೇಡೆನ್ನು ಶಿವಲಿಂಗ । ಯಾರಿಲ್ಲ
ಸಾಕು ಕಾಡುವದು ಮನೆಯೊಳಗೆ ॥ ೨೦ ॥

ಹಡೆದವರು ಹೇಳಿಹರು, ಕಡುಜೋಕೆ ಮನೆಕಡೆಗೆ
ನಡುಹೊತ್ತು ಮೀರಿ ತಡವಾಯ್ತು । ಹೋಗುವೆನು
ಗಡನೆ ಕುಡಿಹಾಲ ಬಗೆಯದಲೆ ॥ ೨೧ ॥

ಮಳ್ಳ ಹುಡುಗಿಯು ಇವಳು, ಬುಳ್ಳ ನುಡಿಯಾಡುವಳು
ಕಳ್ಳಿದರೆ ನನ್ನ ಶಿವಲಿಂಗ । ನಿಮ್ಮುಂದೆ
ಸುಳ್ಳಲ್ಲ ಹರಣ ನೀಗುವೆನು ॥ ೨೨ ॥

ಹಂಬಲಿಸಿ ಬೇಡಿದರು, ನಂಬದಲೆ ಶಿವಲಿಂಗ
ಕಂಬಗಲ್ಲಂತೆ ನಿಂತಿರಲು । ಕೊಡಗೂಸು
ಶಂಭು ನಿನ್ನೊಡನೆ ಸಾಕಾಟ ॥ ೨೩ ॥

ಅನ್ನುತಲಿ ಕೊಡಗೂಸು, ಮುನ್ನ ತಂದೆಯ ಮುಂದೆ
ಚಿನ್ನ ಕಂಬಕನೆ ತಲೆಗೊಡುವ । ಮುನ್ನವೇ
ಹೊನ್ನ ಕಂಬೊಡೆದು ಶಿವನೆದ್ದು ॥ ೨೪ ॥

ಎಲೆಮಗಳೆ ಕೊಡಗೂಸೆ, ಸಲಿಸಿದೆನು ಹಾಲನ್ನು
ನಿಲಕುವದೆ ನಿನ್ನ ಶಿವಭಕ್ತಿ । ಭಕ್ತರಿಗೆ
ಕಲಿಸುವರು ಯಾರು ಶಿವಪಾಠ ॥ ೨೫ ॥

ಎಚ್ಚತ್ತು ನೋಡಿದಳು, ಮೆಚ್ಚಿರುವ ಶಿವನನ್ನು
ತುಚ್ಛಮಾಡದಲೆ ಹಾಲನ್ನು । ಶಿವಲಿಂಗ
ಇಚ್ಛೆಯಲಿ ಕುಡಿದು ನಗುತಿದ್ದ ॥ ೨೬ ॥

ಲಿಂಗಯ್ಯ ನೀಬಾರೋ, ಸಂಗಡಿಗ ನನಗಾಗಿ
ಅಂಜಿಕೆಯು ನನಗೆ ಮನೆಯೊಳಗೆ । ಯಾರಿಲ್ಲ
ತಂದೆತಾಯಿಗಳು ಬರುತನಕ ॥ ೨೭ ॥

ಬತ್ತಲೆಯ ಜಗದಲ್ಲಿ, ಸುತ್ತು ನೋಡದರಿರುವೆ
ಎತ್ತ ಕೂಗಿದರು ಓಗೊಡುವೆ । ಎಲೆಕಂದ
ಕುತ್ತು ಬಂದಾಗ ಕರೆಎನ್ನ ॥ ೨೮ ॥

ಮರುಳಿದಳು ಕೊಡಗೂಸು, ಹರನೆಂದು ಹಾಲ್ಗುಡಿಸಿ
ಹರುಷವಲಿ ಕಳೆಯೆ ಹಗಲಿರುಳು । ಮರುದಿನವೆ
ಹರಿದು ಸಡಗರದಿ ಮೂಡಲವು ॥ ೨೯ ॥

ತುಂಬಿ ಜಗ ಬೆಳಗಿದನು, ಜಂಬದಲಿ ದಿನಮಣಿಯು
ಚುಂಬಿಸಿತು ದಿನವು ಶಿವಭಕ್ತಿ । ಶಿವನಡಿಯ
ಶಂಭುಹರ ಶಿವನೆ ಶರಣೆಂದು ॥ ೩೦ ॥

ಮೂದಿನವು ತಪ್ಪದಲೆ, ಸಾಧಿಸಿದಳಾವ್ರತವ
ಹೋದವರು ತಿರುಗಿ ಮರಳಿದರು । ಕೊಡಗೂಸು
ಹಾಡಿಯಲಿ ಕಂಡು ಹಡೆದವರ ॥ ೩೧ ॥

ತಂದೆತಾಯಿಗಳೊಡನೆ, ಬಂದು ತಲಪುತ ಮನೆಯ
ಮುಂದ್ಹೋಗಿ ತೆರೆದು ಬಾಗಿಲವ । ತಂಬಿಗೆಯ
ತಂದು ನೀರೆರೆಯೆ ಹಡೆದವರು ॥ ೩೨ ॥

ಕಂಬ ಚೌಕಟ್ಟನದು, ಇಂಬಾದ ಪಡಸಾಲೆ
ಜಂಬುಳಿಯ ಹಾಸಿ ದಿಂಬುಗಳ । ಸದನದಲಿ
ಶಂಭುಹರನೆಂದು ಕೂತಿರಲು ॥ ೩೩ ॥

ಕೊಡಗೂಸು ಕೇಳಿದಳು, ಹಡದವಗೆ ಒಡವೆಗಳ
ಕೊಡು ನನಗೆ ತಂದ ತಿನಸುಗಳ । ಆಡುವೆನು
ಸಡಗರದಿ ಶಿವನ ಕರಕೊಂಡು ॥ ೩೪ ॥

ದಟ್ಟಿ ಕುಪ್ಪಸವೆಲ್ಲಿ, ಉಟ್ಟು ನೋಡುವೆನಿಂದು
ಕಟ್ಟಲೊಡ್ಯಾಣ ತಾನನಗೆ । ಕುಂಕುಮದ
ಬೊಟ್ಟು ಹಣೆಗಿಡುವೆ ಕನ್ನಡಿಯ ॥ ೩೫ ॥

ಬೆಂಡು-ಬೆತ್ತಾಸು ಬೇಕು, ಉಂಡೆ-ಹಲಸೆಯು ಬೇಕು
ಗುಂಡ ಚಕ್ಕುಲಿಯು ತಿನಲೆಲ್ಲಿ । ಹಡದಪ್ಪ
ರುಂಡಧಾರಿಯಾ ಗೊಂಬೆಲ್ಲಿ ॥ ೩೬ ॥

ಆಟಕೆಲೆ ತಂದಿರುವೆ, ಮಾಟದೊಡವೆಗಳನ್ನು
ಕಾಟವೇ ಬೇಡ ನಿನಗೀವೆ । ಉಡುತೊಡಿಗೆ
ನೀಟ ಕನ್ನಡಿಯ ತಿನಸುಗಳ ॥ ೩೭

ಮುಗಳೆ ಮೋಹದ ಗಿಳಿಯೆ, ಚಿಗರಗಂಗಳ ಚದುರೆ
ಹಗಲಿರುಳು ದಿನವ ನೀಹೇಗೆ । ಕಳೆದಿರುವೆ
ಬಗೆಯ ಸೊಗಸೆಮಗ ಹೇಳೆಂದ ॥ ೩೮ ॥

ಹಡೆದವರ ನೋಂಪೆಯನೆ, ಬಿಡದೆ ನಾಪಾಲಿಸಿದೆ
ಕುಡಿಸಿದೆನು ಶಿವಗೆ ಹಾಲನ್ನು । ನಿತ್ಯದಲಿ
ನೆಡೆಸಿದ್ದೆ ಹರನ ಶಿವಪೂಜೆ ॥ ೩೯ ॥

ಏನು ಹೇಳುವಿ ಮಗಳೆ, ಮೌನವೇ ಜಗವಾಯ್ತು
ಕಾಣಿಸಿದ! ಶಿವನು ಸತ್ಯವೇ । ನಿನಗಿಂದು
ನಾಣಿಗಳಿಗಿಲ್ಲ ನಿನಗುಂಟೆ ॥ ೪೦ ॥

ಬಲುಕಾಡಿ ಶಿವಮೊದಲು, ತಲೆಯೊಡ್ಡಿ ನಾನಿಲಲು
ನಲಿನಲಿದು ಹಾಲ ಕಡೆಗಾತ । ಕುಡಿಕುಡಿದ
ಹೊಲಬನ್ನೆ ಹೇಳ್ವೆ ನಿಮ್ಮುಂದೆ ॥ ೪೧ ॥

ಅಂದದಲಿ ಮಾತಾಡಿ, ಕಂದ ಬಾಯೆಂದಪ್ಪಿ
ತಂದೆಯಾ ಕರುಳ ತೋರಿದನು । ಶಿವಲಿಂಗ
ಹೊಂದಿ ನನ್ನೊಡನೆ ದಿನಆಡಿ ॥ ೪೨ ॥

ನೋಡುವೆವು ಶಿವಪೂಜೆ, ಮಾಡಿ ಕುಡಿಸಲೆ ಹಾಲ
ಆಡಿ ತೋರಿಸಲೆ ಶಿವನೊಡನೆ । ಎಲೆಮಗಳೆ
ಬೇಡಿದ್ದ ನೀವೆ ಕೈಯೊಳಗೆ ॥ ೪೩ ॥

ಹಡೆದವರೆ ತೋರಿಸುವೆ, ತಡವೇಕೆ ನಾಳೆಯೇ
ಸಡಗರದಿ ಹೋಗಿ ಗುಡಿಯೊಳಗೆ । ಹೆಚ್ಚೇಕೆ
ಕಡುಪಾಪಿಯಲ್ಲ ಸುಳ್ಳೇಕೆ ॥ ೪೪ ॥

ಅಂದಿನಾದಿನದುದಯ, ಎಂದಿಗೂ ಹಾಗಿರದೆ
ಚೆಂದದಲಿ ಸೂಸಿ ಕಿರಣಗಳ । ನೇಸರನು
ಕಂದ ಕೊಡಗೂಸ ಬೆಳಗಿಸಲು ॥ ೪೫ ॥

ಬೆಳಗು ಬೇಗನೆ ಬಂತು, ತಿಳಿಸಲೀ ಜಗಕೆಲ್ಲ
ಸುಳಿಸುಳಿದು ಬೀಸೆ ಗಾಳಿಗಳು । ಶಿವಗಣಕೆ
ಕಳಿಸುವವೊ ಸುದ್ದಿ ಕೋಳೂರ ॥ ೪೬ ॥

ಹೊಂಬಣ್ಣ ಹೂಬಿಸಿಲು, ತುಂಬೆಲ್ಲ ಚೆಲ್ಲಿರಲು
ತುಂಬಿ ಬಟ್ಟಲವ ಹಾಲನ್ನು । ಕೊಡಗೂಸು
ಶಂಭುಹರ ಗುಡಿಗೆ ನಡೆತಂದು ॥ ೪೭ ॥

ಹೊಳೆವಲಿಂಗದ ಬೆಳಕು, ಒಳಗುಡಿಯ ತುಂಬಿತ್ತು
ಒಳಸೂಸಿ ಬಿಸಿಲ ಕೂಡಿತ್ತು । ಗುಡಿಹೊರಗೆ
ಎಳೆಬಿಸಿಲ ನೋಡಿ ನಗುತ್ತಿತ್ತು ॥ ೪೮ ॥

ಕೈಮುಗಿದು ಕೊಡಗೂಸು, ನೇಮದಲಿ ಹಾಲಿಟ್ಟು
ಕಾಮ ಸಂಹರನೆ ಕುಡಿಯೆಂದು । ಉಸಿರಿಡಲು
ಸೋಮಧರ ತಿಳಿದ ಮನದೊಳಗೆ ॥ ೪೯ ॥

ಎಲೆಪಾಪಿನೀ ಮಗಳೆ, ಹೊಲೆಕುಂದ ತಂದೆಮಗೆ
ತಲೆಕಾದು ತಂದೆ ಹೊಡೆಹೋದ । ಕೊಡಗೂಸು
ತಲೆಯ ಹಾಯ್ಸಿದಳು ಲಿಂಗಕ್ಕೆ ॥ ೬೦ ॥

ಲಿಂಗವಿಬ್ಭಾಗಾಗಿ, ಸುಂಗಲಾ ಕೊಡಗೂಸ
ಮುಂಗೈಯ ಚಾಚಿ ಜುಲುಪೆಗಳ । ಜಗ್ಗಿದನು
ಮುಂಗಂಡು ತಂದೆ ಮಗಳೆಂದು ॥ ೬೧ ॥

ಬಿಚ್ಚಿ ಲಿಂಗದಪೀಠ, ಮುಚ್ಚಿಕೊಂಡಿತು ಕೂಸ
ರೊಚ್ಚಿನಲಿ ತಂದೆ ಜುಲುಪೆಗಳ । ಜಗ್ಗುತಿರೆ
ಅಚ್ಚರಿಯ ಹೊಂದಿ ಜನನೋಡಿ ॥ ೬೨ ॥

ಊರಿಗ್ಹಬ್ಬಲು ಸುದ್ದಿ, ಕೇರಿಗಳ ಜನವೆಲ್ಲ
ಸಾರಿ ತಂಡಿಟ್ಟು ಗುಡಿಮುಂದೆ । ಹಾಡಿದರು
ಹೋರೆಯನೆ ಮರೆತು ಶಿವಭಜನೆ ॥ ೬೩ ॥

ಹೆತ್ತವರ ನೋಂಪೆಯನೆ, ಮುತ್ತಾಗಿ ಪಾಲಿಸಲು
ಸತ್ಯ ಶಿವಶರಣಿ ಕೊಡಗೂಸು । ಶಿವಲಿಂಗ
ಎತ್ತಿ ತನ್ನೊಳಗೆ ಒಳಕೊಂಡ ॥ ೬೪ ॥

ದೇವಗನ್ನೆರು ಕೂಡಿ, ಹೂವಿನಾ ಮಳೆಗರೆದು
ಜೀವಲೋಕದಲಿ ಶಿವಭಕ್ತಿ । ಹೊಳೆಯಾಗಿ
ದೇವಲೋಕದಲಿ ಮಿಗೆಹರಿದು ॥ ೬೫ ॥

ಕೋಳೂರ ಲಿಂಗನಿಗೆ, ಏಳುಮುಡಿ ಹೆಳಲುಗಳು
ಕೋಳೂರ ಕೂಸ ಜುಲುಪೆಗಳು । ನೂರುದ್ದ
ಸೀಳಿ ಬೆಳೆದಿಂದು ಕಾಣುವವು ॥ ೬೬ ॥

ರಾಸಿಗಾಳಿಯು ಬೀಸಿ, ಸೂಸಿ ಹರಿಯಿತು ಕಣವು
ಕೂಸ ಕೋಳೂರ ಕಡೆಗಾಳಿ । ಬೀಸಿಂದು
ಮೊಸಲೀ ರಾಸಿ ಜಂಗಮಕೆ ॥ ೬೭ ॥

ಹರಿಚಂದ ಗಾಳಿಗಳು, ಭರದೆ ಬೈಲಿಗೆ ಬೀಸಿ
ಸುರಿಮಳೆಯು ನಮ್ಮ ಬೆಳೆವಲಕೆ । ಕೋಳೂರ
ಬರಿಗಾಳಿ ಬೀಸಿ ಹಗೆತುಂಬಿ ॥ ೬೮ ॥

ಜಂತೆಗುಂಟಲಿ ಎಳೆದ, ನಿಂತ ಕಣಕದ ರಾಸಿ
ಬಂತು ನಿನ್ನಾಡ ಹಾಡುತಲಿ । ಬೆಳತನಕ
ಚಿಂತಿಲ್ಲದೆಡೆಯು ಶಿವನಡಿಗೆ ॥ ೬೯ ॥

ಹಂತಿಯದು ಹಾಡೆಂದು, ಪಂತಕಟ್ಟಲು ಬೇಡ
ಕಂತಿ ಕರಗುವದು ನಿಂತಲ್ಲೆ । ಕೊಡಗೂಸು
ಕುಂತು ಎದೆಯೊಳು ಹಾಡಿಸಿತು ॥ ೬೦ ॥

ಶರಣು ಶರಣೆಂಬುವೆವು, ಹರಣ ಹಾರುವ ತನಕ
ಕರುಣಿಸರಿ ಶರಣೆ ಕೊಡಗೂಸು । ನಮಗಿನ್ನು
ಹರಸರಿ ಹುಲುಸು ಹುಲ್ಲುಲ್ಲಿಗೊ ॥ ೬೧ ॥

— ಮಂಗಲಂ —





# ಗೊಲ್ಲಾಳ





ಉಗ್ಗಡಣೆ :— ನಮ್ಮ ಗೊಲ್ಲಾಳ ಬಂದಾರ ಬನ್ನಿರಿ !
ನಮ್ಮ ಹಿರಿಯರು ಬಂದಾರ ಬನ್ನಿರಿ !
ನಮ್ಮ ಶರಣರು ಬಂದಾರ ಬನ್ನಿರಿ !
ನಮ್ಮ ಗುರುಗಳು ಬಂದಾರ ಬನ್ನಿರಿ !
ನಮ್ಮ ದೇವರು ಬಂದಾರ ಬನ್ನಿರಿ !
ಉಘೆ ಉಘೆ ಉಘೆ ಉಘೇ !!!

ಸೂಚಕ ಪದ್ಯ :- ಕುರಿಯ ಹಿಕ್ಕಿಯ ನಂಬಿ, ಹರನೆಂದು ಪೂಜಿಸಿದ
ಕುರುಬ ಶಿವಭಕ್ತ ಗೊಲ್ಲಾಳ । ಹರಮೆಚ್ಚಿ
ಕರೆದೊಯ್ದನವನ ಶಿವಪುರಕೆ ॥ ೧ ॥

ಬುದ್ಧಿಯಿಲ್ಲದೆ ನಾವು, ಕದ್ದು ಹಾಡುವೆವಿಂದು
ಎದ್ದು ಎದೆಯೊಳಗೆ ಮೈತುಂಬು । ಗೊಲ್ಲಾಳ
ಹುದ್ದೆ ಬೇಡೆಮಗೆ ಜಗದೊಳಗೆ ॥ ೨ ॥

ಮುಗ್ಧ ಶರಣರ ಹಾಡು, ಸಿದ್ಧಿ ಮಂತ್ರವು ನೋಡು
ಸಿದ್ಧಾಗು ಹಾಡ ಹಾಡುದಕೆ । ಎಲೆಜೀವ
ಶುದ್ಧಾಗಿ ಹೊಂದು ಶಿವಪದವ || ೩ ||

ಡೋಣಿ ಹುಲುಸಿನ ನಾಡು, ದಾನಧರ್ಮದ ಬೀಡು
ತಾಣ ಜಂಗಮರ ತಾಯ್ನಾಡು । ಗೊಲಗೇರಿ
ತಾಣ ಗೊಲ್ಲಾಳ ಹುಟ್ಟಿದ್ದು || ೪ ||

ಹಡೆಪವನು ಬಡಕುರುಬ, ನಡೆಸಿದ್ದ ಜೀವನವ
ಕಡುದುಡಿದು ಮಡದಿಯೊಡಗೂಡಿ । ಕುರಿಹಿಂಡ
ಎಡಬಿಡದೆ ಬೆಳಿಸಿ ದೊರೆಯಾದ || ೫ ||

ಕುರಿಹಿಂಡ ಕಟಿಕೊಂಡು, ಮರೆತಿದ್ದ ಬಡತನವ
ಇರುತಿರಲು ಹುಟ್ಟಿ ಮಗನೊಬ್ಬ । ಗೊಲ್ಲಾಳ
ವರಪುತ್ರನಾದ ಹಡೆದವಗೆ || ೬ ||

ಊರ ಕೇರಿಗಳಲ್ಲಿ, ಬೀರ ಮಂದಿಯವಾಸ
ಮೀರಿ ಜಂಗಮರ ಮಠವಾಸ । ನಿತ್ಯದಲಿ
ಸಾರುವರು ಲಿಂಗ ಮಹಿಮೆಯನು || ೭ ||

ನಿತ್ಯದಲಿ ಕೇಳಿದನು, ಚಿತ್ತದಲಿ ಗೊಲ್ಲಾಳ
ಸತ್ಯ ಶಿವಲಿಂಗ ಶಿವಭಜನೆ । ಜಂಗಮರ
ಅತ್ತಳದಿ ಪೂಜೆ ಲಿಂಗನಿಗೆ ॥ ೮ ॥

ಜಂಗಮರ ಶಿವಪೂಜೆ, ಲಿಂಗವನೆ ನೆನೆಸಿದನು
ಹಿಂಗಿಸೀ ಆಶೆ ಶಿವಲಿಂಗ । ನನಗೊಲಿದು
ಲಿಂಗಾಗಿ ಕೂತು ಕೈಯೊಳಗೆ ॥ ೯ ॥

ಹುಡುಗ ಗೊಲ್ಲಾಳಯ್ಯ, ಗಡನೆ ಬೇಡನು ಲಿಂಗ
ಕೊಡಿರೆಂದು ನಾಡ ಜಂಗಮರ । ಹಗಲಿರುಳು
ತಡೆತಡೆದು ನೆನೆಸಿ ಇರುತಿರಲು ॥ ೧೦ ॥

ಕುರಿಕಾಯ್ವ ಕುಲಗೆಲಸ, ನಿರುತದಲಿ ಮಾಡುವದು
ಹೊರಿಸಿದನು ತಂದೆ ತನಯನಿಗೆ । ಗೊಲ್ಲಾಳ
ಹರುಷದಲಿ ಕಾಯ್ದ ಕುರಿಹಿಂಡ ॥ ೧೧ ॥

ಸರಿಗೆಳೆಯರೊಡಗೂಡಿ, ಕುರಿಹಿಂಡ ತಿರಿಕೊಂಡು
ತರಬುತಲಿ ಅಡವಿ ಬೈಲೊಳಗೆ । ನಿತ್ಯದಲಿ
ಹರಲೀಲೆ ಹಾಡಿ ಆಡುತಲಿ ॥ ೧೨ ॥

ಲಿಂಗವೇ ಗತಿಯೆಂದು, ಪೆಂಗ ಕುರುಬರಿಗಂದ
ಲಿಂಗಯ್ಯ ಮೆಚ್ಚಿ ಹರಸಿದರೆ । ಕುರುಬರಿಗೆ
ಗಂಗ್ಯಾಗಿ ಹೊನ್ನು ಹರಿಯುವದು || ೧೩ ||

ಎಂದಾಡಿ ಗೊಲ್ಲಾಳ, ಬಂದ ಹುಡುಗರಿಗೆಲ್ಲ
ಇಂದಿಲ್ಲಿ ಪೂಜೆ ಲಿಂಗಿಟ್ಟು । ಮಾಡಿದರೆ
ಮುಂದೆಮಗೆ ಬುತ್ತಿ ಕೈಲಾಸ || ೧೪ ||

ಪರವುತದ ಕಂಬಿಗಳು, ಬರುತಿರವ ಹಾದಿಯೊಳು
ಮರೆಯದಲೆ ಹೋಗಿ ಗೊಲ್ಲಾಳ । ಕೇಳಿದನು
ತರಲು ಹೇಳಿರುವ ಗಿರಿಲಿಂಗ || ೧೫ ||

ಮುದುಕ ಜಂಗಮ ತಾನು, ಎದಕೆ ಕುರುಬರಿಗೆಂದು
ಬದಿಯೊಳಗೆ ಬಿದ್ದ ಕುರಿಹಿಕ್ಕಿ । ತಗೆದೆತ್ತಿ
ಇದೊ! ಲಿಂಗ ಕೊಡುವೆ ಗೊಲ್ಲಾಳ || ೧೬ ||

ಹರಹರನೆ ಗಿರಿಲಿಂಗ, ಗುರುಲಿಂಗವೆನಗಾದಿ
ಎರಗಿದನು ಭಕ್ತ ಗೊಲ್ಲಾಳ । ಹರುಷದಲಿ
ಕುರುಬರೊಡಗೂಡಿ ಕಾಡೊಳಗೆ || ೧೭

ಕಂಬಿ ಕವಡೆಗಳೊಡೆಯ, ಶಂಭುಪರ ಮಲ್ಲಯ್ಯ
ನಂಬಿ ಪೂಜಿಸಲು ಭಕ್ತರಿಗೆ । ಜಗದೊಳಗೆ
ಇಂಬುಗೊಡು ಮೆಚ್ಚಿ ಗಿರಿಮಲ್ಲ ॥ ೧೮ ॥

ಮಳಲ ದಿನ್ನಿಯ ಮಾಡಿ, ಪೊಳೆವ ಹಿಕ್ಕಿಯನಿಟ್ಟು
ಹೊಳಲ ಲಿಂಗಿಲ್ಲಿ ನೆನೆಎಂದು । ಭಕ್ತಿಯಲಿ
ತಿಳಿಗೊಳಲ ನೀರ ಸಿಂಬಡಿಸಿ ॥ ೧೯ ॥

ಕಾಡಪತ್ರಿಯನೆತ್ತಿ, ಕಾಡಹೂಗಳ ಕೊಯ್ದು
ಓಡ್ಯಾಡಿ ತಂದು ಶಿವಪೂಜೆ । ಮಾಡಿದರು
ನೋಡಿ ನಗುತಿದ್ದ ಶಿವಲಿಂಗ ॥ ೨೦ ॥

ನೊರೆಬಂದ ಕುರಿಹಾಲ, ಪರಮೆಂದು ಎಡೆಮಾಡಿ
ಕುರಿಹಿಕ್ಕಿಗಂಡ ಲಿಂಗಯ್ಯ । ಬೆಳಗಿದರೆ
ಧರೆಗೆಲ್ಲ ಬೆಳಕು ಹರಿಯುವದು ॥ ೨೧ ॥

ಕಾಡಿನಲಿ ಗೊಲ್ಲಾಳ, ಬೇಡುವನು ಲಿಂಗನಿಗೆ
ನಾಡು ಚೆಂದಲ್ಲ ಶಿವಲಿಂಗ । ನೋಡಿಲ್ಲಿ
ಬೀಡು ಬಿಟ್ಟೈಹುದು ಬನಸಿರಿಯು ॥ ೨೨ ॥

ತಂಪು ತುಂಬಿದ ಗಾಳಿ, ಕೆಂಪು ಬನದೊಳು ಸುಳಿದು
ಸಂಪಾಗಿ ಬೀಸಿ ಗಲ್ಲಿಸಲು । ಚೆಂಗಾಟ
ಸೊಂಪು ನೋಡಿಲ್ಲಿ ಬನದೊಳಗೆ ॥ ೨೩ ॥

ಕೌಂಜಗವು ಕೂಗುವದು, ಮೋಜಿನಲಿ ನವಿಲುಗಳು
ಬಾಜು ಬಾಜಾಗಿ ಕುಣಿಯುವವು । ಕೋಗಿಲೆಯು
ಕೋಚು ಎತ್ತುವದು ಸಿಳ್ಳಾಕಿ ॥ ೨೪ ॥

ಗುಂಗಿಗಳು ಗುಂಯೆಂದು, ಸಂಗಜೋಡಣೆ ಮಾಡಿ
ಹಂಗ ರಂಗಾಗಿ ಬಲಗೊಂಡು । ಹಾರಾಡಿ
ಲಿಂಗಯ್ಯ ನಿನಗೆ ಸುತ್ತುವವು ॥ ೨೫ ॥

ಒಕ್ಕಲಿಗ ಹಾಡುವನು, ಹಕ್ಕಿಗಳು ಉಲಿಯುವವು
ಮಿಕ್ಕ ಮಿಗಜಾತಿ ಮಣಿದಾಡಿ । ಬೀಸುವವು
ಚೊಕ್ಕ ಬಾಲೆತ್ತಿ ಚೌರಿಗಳ ॥ ೨೬ ॥

ಹರಪೂಜೆ ಗೈಯುತಲಿ, ಹರಭಜನೆ ಮಾಡುತಲಿ
ತರತರದಿ ಕುಣಿದು ಹಾಡುತಲಿ । ಗೊಲ್ಲಾಳ
ನೆರೆಬೆರೆವ ಲಿಂಗ ಪೂಜೆಯೊಳು ॥ ೨೭ ॥

ಹಿಂಡಿನೊಳಗಿರು ನಾಯಿ, ಹಿಂಡಗಲಿ ಕೇಳುವವು
ಚೆಂಡ ಮೇಲೆತ್ತಿ ಶಿವಭಜನೆ । ತೊರೆಬಿಟ್ಟು
ಹಿಂಡುವದು ನಿಂತು ಕುರಿಹಿಂಡು ‖ ೨೮ ‖

ಕುರುಬಗೆಳೆಯರು ಅಂಜಿ, ತಿರುವಿ ಮನೆಕಡೆ ಹಿಂಡ
ಅರುವಾಗಿ ಎದ್ದು ಸಂಜೆಯೊಳು । ಗೊಲ್ಲಾಳ
ಕುರಿಹಿಂಡ ಹುಡುಕಿ ಮನೆಸೇರಿ ‖ ೨೯ ‖

ಕುರಿಹಿಂಡು ಕಾಡಿನೊಳು, ತಿರುಗಾಡಿ ಮೇಯುತಲಿ
ಮರದಡಿಗೆ ಮಲಗಿ ಬೇಗಿನೊಳು । ಮನೆಸೇರಿ
ತೊರೆತುಂಬಿ ಹಾಲ ಹಿಂಡುವವು ‖ ೩೦ ‖

ಕಳೆದಂತೆ ದಿನಮಾಸ, ಅಳುಕದಲೆ ಗೊಲ್ಲಾಳ
ಎಳಕಾದರೇನು ವಯದೊಳಗೆ । ಶಿವಭಕ್ತಿ
ಎಳೆನೆರೆಯು ಬೆಳೆದು ಹೊಳೆದಂತೆ ‖ ೩೧ ‖

ಕಡುಭಕ್ತ ತಾನಾಗಿ, ಮಿಡುಕದಲೆ ಶಿವಪೂಜೆ
ನೆಡೆಸಿದನು ನಿತ್ಯ ಕಾಡೊಳಗೆ । ಗೊಲ್ಲಾಳ
ಹೊಡೆದಟ್ಟಿ ಹಿಂಡ ಮೇಯುದಕೆ ‖ ೩೨ ‖

ಬಡಪಾಯಿ ಕುರಿಹಿಂಡು, ಅಡವಿಯೊಳು ಸರುಸೇರಿ
ಜಡೆಹುಲ್ಲು ಮೇಪು ತೂಗಡಿಸಿ । ನಿಂತಿರಲು
ಗುಡುಗಿದವು ತೋಳ ಸರುವಿನೊಳು || ೩೩ ||

ಗಾಯಿಗಳ ಸುಳುವಿಲ್ಲ, ನಾಯಿಗಳ ನಾತಿಲ್ಲ
ಕಾಯಿ ಪಾಡಾಗಿ ಸಿಕ್ಕಂತೆ । ತೋಳಗಳು
ಬಾಯಿಯೊಳು ಕಚ್ಚಿ ಕುರಿತಿಂದು || ೩೪ ||

ಜಪ್ಪಿಸುತ ತೋಳಗಳು, ತಪ್ಪದೆಲೆ ಕುರಿಗಳನು
ಗಪ್ಪೆಂದು ನುಂಗಿ ಕಾಡೊಳಗೆ । ಕೂಗುವವು
ದಪ್ಪಾಗಿ ಉಬ್ಬಿ ಮದವೇರಿ || ೩೫ ||

ತೋಳಗಳ ಕಾಟಾಗಿ, ಗೋಳು ಕುರುಬರಿಗಾಯ್ತು
ಹೇಳಿದರು ತಮ್ಮ ಹುಡುಗರಿಗೆ । ಕುರಿಹಿಂಡ
ಕಾಳಜಿಯ ಮಾಡಿ ಕಾಯ್ರೆಂದು || ೩೬ ||

ಹಿಗ್ಗುತಲಿ ಗೊಲ್ಲಾಳ, ಎಗ್ಗಿಲ್ಲದಿರುತಿರಲು
ಲಗ್ಗೆ ಕುರಿಗಳಿಗೆ ಹೆಚ್ಚಾಯ್ತು । ಹಡದಪ್ಪ
ಕುಗ್ಗಿದನು ನೋಡಿ ಚಿಂತೆಯಲಿ || ೩೭ ||

ತಂದೆ ಗೊಲ್ಲಾಳನಿಗೆ, ಅಂದು ಹೇಳಿದ ಕರೆದು
ತೊಂದರೆಯು ನಮಗೆ ಹಾಳಾಗಿ। ಕುರಿಹಿಂಡು
ಮಂದಿಯೊಳು ಮೋರೆ ಎತ್ತುದಕೆ ॥ ೩೮ ॥

ಜೋಕೆ ನಮ್ಮೀಹಿಂಡ, ಮೂಕಾಗಿ ಇರಬೇಡ
ಯಾಕೆ ಗೊಲ್ಲಾಳ ಮಾತಾಡು। ಇನ್ಮುಂದೆ
ತಾಕೀತು ತೋಳ ಕುರಿತಿನಲು ॥ ೩೯ ॥

ದಿನದಿನವೆ ನಡೆಸಿದರು, ಬನದೊಳಗೆ ಶಿವಪೂಜೆ
ಕಣಗಟ್ಟಿ ನಿಂತು ಕುಣಿದಾಡಿ। ಒಂದಿವಸ
ಮನ ತುಂಬಿ ಕುಂತ ಗೊಲ್ಲಾಳ ॥ ೪೦

ಕುಂತ ಗೊಲ್ಲಾಳನಿಗೆ, ಎಂತು ಮಾತಾಡಿದರು
ಬಂತು ಹೋತೆಂಬ ಪರಿವಿಲ್ಲ। ಕಾಡೊಳಗೆ
ಕಂತು ಹರನೋಡಿ ಬೆರಗಾದ ॥ ೪೧ ॥

ಹೊತ್ತು ಮುಣುಗಿದರೇನು, ಕತ್ತಲಾದರೆ ಏನು
ಸುತ್ತ ಹುಲಿಕರಡಿ ಗುಡಗಿದರೆ। ಭಯವೇನು
ಚಿತ್ತದಲಿ ಇದ್ದ ಶಿವಲಿಂಗ ॥ ೪೨ ॥

ಅಲೆಯುತಲಿ ಕುರಿಹಿಂಡು, ಬಲುಮೇದು ಕಾಡೊಳಗೆ
ಮೆಲುಕಾಡಿಸುತಲಿ ನಿಂತಿರಲು । ತೋಳಗಳು
ಕೆಲಕುರಿಯ ಮುರಿದು ಗುಡುಗಿಡಲು || ೪೩ ||

ಕುರುಬರೆಲ್ಲರು ಹೆದರಿ, ಕುರಿಹಿಂಡ ಹುಡುಕಿದರು
ಥರಥರನೆ ನಡುಗಿ ಬೆವರಾರಿ । ಎದೆಹೋಗಿ
ಕುರಿಕೊಂದ ತೋಳ ನೋಡುತಲಿ || ೪೪ ||

ಸುತ್ತಿರುವ ಕುರಿಹಿಂಡ, ಒತ್ತಿ ಕುರುಬರು ತಿರುವಿ
ತತ್ತರಿಸಿ ಹೇಳಿ ಮನೆಯೊಳಗೆ । ಗೊಲ್ಲಾಳ
ಮತ್ತೆ ಕಳಕೊಂಡ ಕುರಿಹಿಂಡ || ೪೫ ||

ತೋಳಗಂಜಿದ ಹಿಂಡು, ಹೋಳಾಯ್ತು ದಿಕ್ಕೆಟ್ಟು
ಬೀಳುತೇಳುತಲಿ ಕಾಡೊಳಗೆ । ಗೊಲ್ಲಾಳ
ಕೇಳದಲೆ ಪೂಜೆ ನಡೆಸಿದ್ದ || ೪೬ ||

ಗೊಲ್ಲಾಳನಾತಂದೆ, ಕಲ್ಲೆದೆಯ ಬಂಟನವ
ಹೊಲ್ಲ ಬಡತನವ ಬಲುಸೋಸಿ । ಇತ್ತೀಚೆ
ಎಲ್ಲ ಸಂಪತ್ತು ಗಳಿಸಿದ್ದ || ೪೭ ||

ಹೊತ್ತಿನಲಿ ಬರುಹಿಂಡು, ಕತ್ತಲಾದರು ಇಲ್ಲ
ಎತ್ತ ಹೋದನೀ ಗೊಲ್ಲಾಳ । ಎಂದೆನುತ
ಚಿತ್ತ ಎರಡಾಗಿ ಕೂತಿರಲು ॥ ೪೮ ॥

ಹೇಳಿದರಾ ಕುರುಬರು, ಕೇಳಿದನು ಹೌಹಾರಿ
ತಾಳದೇ ಹೋದ ಮನದೊಳಗೆ । ಜಗದೊಳಗೆ
ಕಾಳಗತ್ತಲೆಯು ತುಂಬಿರಲು ॥ ೪೯ ॥

ಕೋಪ ಕುರುಬಗೆ ಮೀರಿ, ತಾಪವೇರಿತು ತಲೆಗೆ
ಮಾಫು ನಾಮಾಡೆ ಮಗನನ್ನು । ಸಂಪತ್ತ
ಸಾಪಮಾಡಿದನು ನಂದಿಂದು ॥ ೫೦ ॥

ಇರುಳೆಲ್ಲ ಮಲಗದಲೆ, ಬರುವ ಹಾದಿಯ ಕಾಯ್ದ
ಬರಲಿಲ್ಲ ಮನೆಗೆ ಗೊಲ್ಲಾಳ । ಹಡೆದವನು
ಕರಕರನೆ ಹಲ್ಲ ತಿನತಿದ್ದ ॥ ೫೧ ॥

ಕಾಡಿನಲಿ ಗೊಲ್ಲಾಳ, ಹಾಡುತಲಿ ಶಿವಭಜನೆ
ಬೀಡ ಬಿಟ್ಟಲ್ಲಿ ಬೆಳತನಕ । ಕೂತಿರಲು
ಕಾಡು ಒಂದಾಗಿ ಕಿವಿಕೊಟ್ಟು ॥ ೫೨ ॥

ಧುಮುಕಿಯನು ಮಾಡಿದನು, ಸಮಯಕರಿಯದ ನೀತಿ
ಸಮಗಣ್ಣು ಇದ್ದು ಕುರಡಾದ । ಹಡೆದವನು
ತಮದೊಳಗೆ ಕಣ್ಣು ತೆರದಂತೆ || ೬೩ |

ಲೆಕ್ಕಿಸದೆ ಶಿವಪೂಜೆ, ಸೊಕ್ಕಿನಿಂದಲಿ ಉಬ್ಬಿ
ಹಿಕ್ಕೆಂದು ಒದೆಯೆ ಭಂಗಾಯ್ತು । ಗೊಲ್ಲಾಳ
ಪಕ್ಕೆಂದು ತೆರೆದ ಹೊರಗಣ್ಣು || ೬೪ ||

ತಂದೆ ಮುಂದಿರಲವಗೆ, ಬಂದ ಕಾರಣ ತಿಳಿಯ
ಚೆಂದ ಶಿವಲಿಂಗ ಬಿದ್ದಿರಲು । ಘನಕೋಪ
ಬಂದು ಚಿಮ್ಮುತಲಿ ಮೈಯೊಳಗೆ " ೬೫ ||

ಹರನೊದ್ದ ನರಪಾಪಿ, ಇರಲಾರಿ ಬದುಕಿನ್ನು
ಕರೆಯಲಾರಿನ್ನು ತಂದೆಂದು । ಸಹಿಸುವೆನೆ
ಹರನಿಂದೆ ಎಂದ ಗೊಲ್ಲಾಳ || ೬೬

ಕಡುಪಾಪಿ ಬಿಡೆನಾನು, ಕಡಿದು ಚೆಲ್ಲುವೆ ನಿನ್ನ
ಕೊಡಲಿಯನ್ನೆತ್ತಿ ತಲೆಗಿಡಲು । ಕುರಿಹಿಕ್ಕಿ
ದಢಲೆಂದು ಒಡೆದು ಶಿವನೆದ್ದು || ೬೬ ||

ನುಡಿಸಿದನು ಡಮರಿಯನು, ಹೆಡೆಯೆತ್ತಿ ನಾಗಾಡಿ
ಜಡೆಯೊಳಗೆ ಗಂಗೆ ನೀರ್ಕಾರಿ । ಶೂಲ್ಹಿಡಿದು
ಬಿಡದೆತ್ತಿ ಶಂಖ ನೂದಿದನು ॥ ೬೮ ॥

ಶಿವಭೇರಿ ಮೊಳಗುತಲಿ, ಶಿವಗಣವು ಕೇಳುತಲಿ
ಭುವದೊಳಗೆ ನೋಡಿ ಶಿವಲೀಲೆ । ಗೊಲ್ಲಾಳ
ಶಿವಶರಣನೆಂದು ಹಾಡುತಲಿ ॥ ೬೯ ॥

ಗೊಲಗೇರಿ ಗೊಲ್ಲಾಳ, ತುಳುಕದಾ ಶಿವಶರಣ
ಅಳುಕದಲೆ ಕೊಂದ ಹಡೆದವನ । ಹೂಮಳೆಯು
ಹುಲುಸಾಗಿ ಸುರಿಸಿ ಶಿವಲೋಕ ॥ ೭೦ ॥

ಕಂಡಕಡೆ ಚೆದರಿರುವ, ಹಿಂಡು ಕುರಿಗಳು ಬಂದು
ತಂಡುತಂಡಾಗಿ ಶಿವಲಿಂಗ । ಸುತ್ತಿರಿಗಿ
ಮಂಡೆಗಾಲೂರಿ ವಂದಿಸಲು ॥ ೭೧ ॥

ಹಾಲು ಹಿಂಡಿತು ಹಿಂಡು, ಮೇಲಾಯ್ತು ಭೂಲೋಕ
ಹಾಲ್ಹೊಳೆಯು ಹರಿದು ಮಡನಿಂತು । ಸಗ್ಗದೊಳು
ಹಾಲ್ಗಡಲು ಎಂದು ಹೆಸರಾಯ್ತು ॥ ೭೨ ॥

ಕುರಿಯ ಹಿಕ್ಕಿಯ ನಂಬಿ, ಹರನೆಂದು ಪೂಜಿಸಿದ
ಕುರುಬ ಶಿವಭಕ್ತ ಗೊಲ್ಲಾಳ । ಹರಮೆಚ್ಚಿ
ಕರೆದೊಯ್ದನವನ ಶಿವಪುರಕೆ ॥ ೭೩ ॥

ಕುರುಬನೆಂದನಬೇಡ, ಹರಭಕ್ತಗೊಲ್ಲಾಳ
ಹರಮೆಚ್ಚಿ ಮೂಡಿ ಹಿಕ್ಕಿಯೊಳು । ಬೆಳಗಿದನು
ನರಲೋಕ ನೋಡಿ ಕೈಮುಗಿದು ॥ ೭೪ ॥

ಅಡವಿ ಪೂಜೆಯ ಮಾಡಿ, ಎಡೆಮಾಡಿ ಕೂರಿಗಿಗೆ
ಒಡೆಯ ಗೊಲ್ಲಾಳ ಬಿತ್ತಿದರೆ । ಮಳೆಯಾಗಿ
ಕಡೆರಾಸಿ ತುಂಬಿ ಕೈಸೋತು ॥ ೭೫ ॥

ಹಂತಿಯದು ಹಾಡೆಂದು, ಪಂತಕಟ್ಟಲು ಬೇಡ
ಕಂತಿಕರಗುವದು ನಿಂತಲ್ಲೆ । ಗೊಲ್ಲಾಳ
ಕುಂತು ಎದೆಯೊಳಗೆ ಹಾಡಿಸಿದ ॥ ೭೬ ॥

ಶರಣು ಶರಣಂಬುವೆವು, ಹರಣ ಹಾರುವ ತನಕ
ಕರುಣಿಸಿರಿ ಶರಣ ಗೊಲ್ಲಾಳ । ನಮಗಿನ್ನು
ಹರಸಿರಿ ಹುಲುಸು ಹುಲ್ಲುಲ್ಲಿಗೊ ॥ ೭೭ ॥

— ಮಂಗಲಂ —